# ದಾಸರಪದಸಂಗ್ರಹವು - 2



ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ

ಉಡುಪಿ

॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

ಗೋವಿಂದವಿಠಲ, ಕಮಲಾಪತಿವಿಠಲ, ವಾಸುದೇವ
ವಿಠಲ, ಪ್ರಾಣೇಶವಿಠಲ, ಶ್ಯಾಮಸುಂದರವಿಠಲ,
ವೆಂಕಟವಿಠಲ, ವೇಣುಗೋಪಾಲವಿಠಲ,
ಇವೇ ಮೊದಲಾದ ಅಂಕಿತಗಳುಳ್ಳ

# ದಾಸರಪದಸಂಗ್ರಹವು

## ೨ನೇ ಭಾಗವು.

ಪ್ರಥಮಾವೃತ್ತಿ.

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1927.

ಕ್ರಯ: ೧೦ ಆಣೆ.

# ಉಪೋದ್ಘಾತವು.

ಈ ಭರತಖಂಡದಲ್ಲಿ ಶಾಸ್ತ್ರವನ್ನರಿಯದ ಅತ್ಯಂತ ಪಾಮರಜನರ ಹೃದಯದಲ್ಲೂ ಕೂಡ ಭಗವಂತನ ಪರಮಾನುಗ್ರಹಕ್ಕೆ ಮುಖ್ಯಕಾರಣವಾದ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹರೂಪ ಭಕ್ತಿರಸವನ್ನು ಎರಕವಾಗಿ ನೆಲಗೊಳಿಸಲು, ಅನೇಕ ಮಹಾತ್ಮರೇ ಪುರಂದರದಾಸಾದಿ ರೂಪಗಳಿಂದ ಕಂಗೊಳಿಸಿ, ಆಸ್ತಿಕರನ್ನೆಲ್ಲ ಉದ್ಧರಿಸಿದ್ದಾರೆ.

ಆ ದಾಸಕೂಟವೆಂಬ ರತ್ನಮಾಲೆಯಲ್ಲಿ ನಾಯಕಮಣಿಗಳಾದ ಶ್ರೀಪಾದರಾಯರು, ಶ್ರೀವ್ಯಾಸರಾಯರು, ಶ್ರೀವಾದಿರಾಜರು, ಪುರಂದರದಾಸ, ಕನಕದಾಸ, ವಿಜಯದಾಸ, ಜಗನ್ನಾಥದಾಸರು ಇತ್ಯಾದಿ ಮಹನೀಯರ ಪದ್ಧತಿಯನ್ನನುಸರಿಸಿ, ಪ್ರಾಣೇಶದಾಸಾದಿಗಳೆಂಬ ರತ್ನಗಳೂ ತಮ್ಮ ಕೀರ್ತನಕೀರ್ತಿಕಿರಣಗಳಿಂದ ಪ್ರಪಂಚವನ್ನು ಬೆಳಗಿಸಿದ್ದಾರೆ. ಈ ದಾಸರೆಲ್ಲರೂ ರತ್ನಗಳಿದ್ದಂತೆ ಇವರ ಕೀರ್ತನಗಳೂ ಉತ್ತಮರತ್ನಗಳಾಗಿ ಆಸ್ತಿಕರ ಕಂಠಾಭರಣಗಳೇ ಆಗಿದ್ದಾವೆಂಬುದರಲ್ಲಿ ಸಂಶಯವಿಲ್ಲ.

ಸುಮಾರು ೩೦೦ ವರ್ಷಗಳಿಂದ ಕರ್ನಾಟಕದೇಶಮಾತೆಯು ಈ ಕಂಠಾಭರಣದಿಂದ ಶೋಭಿಸುತಲಿದ್ದರೂ ಆಕೆಯ ಪುತ್ರರಾದ ನಮ್ಮೆಲ್ಲರ ಆಲಸ್ಯವೆಂಬ ಕೆಸರಿಂದ ಆ ರತ್ನಗಳು ಮಲಿನವಾಗಹತ್ತಿ, ಹೆಚ್ಚು ಜನರಿಗೆ ರತ್ನಮಾಲೆಯ ಗುರುತೇ ಇಲ್ಲದಂತಾಗಿದೆ.

ಇದನ್ನು ಕಂಡು ಅನೇಕ ಮಹನೀಯರ ಸೂಚನೆಯಿಂದ ಪುರಂದರದಾಸಾದಿಗಳ ಕೀರ್ತನೆಗಳನ್ನು ಪ್ರತ್ಯೇಕಪ್ರತ್ಯೇಕ ಪ್ರಕಟಿಸಿದ್ದಲ್ಲದೆ ಶ್ರೀದ

ವಿಠಲಾದ್ಯನೇಕ ಮುದ್ರಿಕೆಗಳುಳ್ಳ ವಿವಿಧ ಕೀರ್ತನೆಗಳ 'ದಾಸರಪದ ಸಂಗ್ರಹವು' ಯೆಂಬ ೧ನೇ ಭಾಗದ ಪುಸ್ತಕವನ್ನು ಪ್ರಕಟಿಸಿ, ಮತ್ತು ಪ್ರಾಣೇಶವಿಠಲಾದಿ ಅಂಕಿತಗಳುಳ್ಳ ಅನೇಕ ಹೊಸಕೀರ್ತನೆಗಳು ದೊರಕಿದ್ದುದರಿಂದ **'ದಾಸರಪದಸಂಗ್ರಹ, ೨ನೇ ಭಾಗ'**ವೆಂಬ ಈ ಪುಸ್ತಕವೂ ಆಸ್ತಿಕರ ಮನಸಂತೋಷಕ್ಕಾಗಿ ಪ್ರಕಟಿಸಲ್ಪಟ್ಟಿದೆ.

ಕೆಲವು ಕೀರ್ತನೆಗಳ ರಾಗವು ಮೂಲಪ್ರತಿಯಲ್ಲಿಲ್ಲದ್ದರಿಂದ ಇದ್ದಂತೆಯೇ ಛಾಪಿಸಲ್ಪಟ್ಟಿದೆ. ಪ್ರಾಯಶಃ ಮೂಲಕ್ಕನುಸರಿಸಿ ಮುದ್ರಿತಗಳಾದ ಈ ಕೀರ್ತನೆಗಳಲ್ಲಿ ಬಲ್ಲವರು ದಯವಿಟ್ಟು ತಿದ್ದಿಕೊಳ್ಳುವದು. ಇಲ್ಲಿಗೆ ಯಾತ್ರಿಕರಾಗಿ ಬಂದಿದ್ದ ಮಾನವಿಕ್ಷೇತ್ರದ ವೇ|| ಕುರ್ಡಿ ಗುಂಡಾಚಾರ್ಯ ಜೋಶಿ, ಇವರು ಇದರಲ್ಲಿರತಕ್ಕ ಅನೇಕ ಕೀರ್ತನೆಗಳನ್ನು ಶೋಧಿಸಿ ತಮ್ಮ ಸಂಗ್ರಹದಲ್ಲಿದ್ದ ಕೆಲವು ಕೀರ್ತನೆಗಳನ್ನು ಕೊಟ್ಟು ಸಹಾಯಮಾಡಿದ್ದಕ್ಕಾಗಿಯೂ, ಕೀರ್ತನಭೂಷಣ ಹಂಡೆ ಶ್ರೀಪಾದದಾಸರು ಅನೇಕ ಕೀರ್ತನೆಗಳಿಗೆ ರಾಗತಾಳ ಹಾಕಿಕೊಟ್ಟು ಸಹಾಯಮಾಡಿದ್ದಕ್ಕಾಗಿಯೂ ಕೃತಜ್ಞತೆಯುಳ್ಳವನಾಗಿದ್ದೇನೆ.

ಇತಿ ಸುಜನವಿಧೇಯ,

| | |
|---|---|
| **ಉಡುಪಿ.** | ಪಾವಂಜೆ ಗುರುರಾವ್, |
| ತಾ. 22—4—1927. | ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ. |

# ಅನುಕ್ರಮಣಿಕೆ.

## ಸಂಪೂರ್ಣವು.

॥ ಶ್ರೀಃ ॥

॥ ಶ್ರೀಪಾಂಡುರಂಗವಿಠಲಾತ್ಮಕ ಗೋಪಾಲಕೃಷ್ಣಾಯ ನಮಃ ॥

# ದಾಸರಪದಸಂಗ್ರಹವು.

## ಭಾಗ ೨.

### † ೧. ರಾಗ ನಾದನಾಮಕ್ರಿಯೆ, ಮಿಶ್ರಛಾಪುತಾಳ.

ಏಕಾಂತದಿ ಶ್ರೀಕಾಂತನ ಭಜಿಸಲು । ಲೋಕಾಂತರ ಸುಖ ಪ್ರಾಪ್ತಿ ॥ ಭೂಕಾಂತನ ಭಜಿಸಲು ಮಾಕಾಂತನು ವಲಿಯನು । ಲೋಕಾಂತರ ನಿರಯಾಪ್ತಿ ॥ ಪಲ್ಲ ॥ ಅಲವಬೋಧರನು ವಲಿಸಲು ಶಿರಿ । ನಿಲಯನು ನೀಡುವ ಮುಕುತಿ ॥ ಕುಲಹೀನರ ಮನ ವಲಿಸಲು ನರಕದಿ । ಮಲ ಯಾತನ ಭುಕುತಿ ॥ ಸಿರಿರಮಣನ ಪದಯುಗಳವ ಭಜಿಸಲು । ದೊರೆವದೀಗ ಮೋಕ್ಷ ॥ ನರಜನ ಗುಣಗಳ ವರಣನೆ ಮಾಡಲು । ನಿರಯ ದುಃಖ ಪ್ರತ್ಯಕ್ಷ ॥ ೨ ॥ ವೀತದೋಷನಿರ್ಭೀತ ಗುರು ಜಗ । ನ್ನಾಥವಿಠಲರೇಯ ॥ ನಾತು ಕೇಳಿ ನಿಜ ಮಾತೆಯ ತೆರದಲಿ । ದೂತರ ಪಿಡಿವನು ಕೈಯಾ ॥ ೨ ॥

### ೨. ರಾಗ ಪೀಲು, ಆದಿತಾಳ.

ಎದ್ದು ಬರುತಾರೆ ನೋಡೆ । ತಾ । ವೆದ್ದು ಬರುತಾರೆ ನೋಡೆ ॥ ಪಲ್ಲ ॥ ಮುದ್ದು ವೃಂದಾವನ । ಮಧ್ಯದೊಳಗಿಂದ । ತಿದ್ದಿ ಹಚ್ಚಿದ ನಾಮ । ಮುದ್ರೆಗಳೊಪ್ಪುತ್ತಿಹ ॥ ಅನುಪಲ್ಲ ॥ ಗಳದೊಳು ಶ್ರೀತುಳಸಿ । ನಳಿನಾಕ್ಷಿ ಮಾಲೆಗಳು ॥ ಚೆಲುವ ಮುಖದೊಳು । ಪೊಳೆವ ದಂತಗಳಿಂದ ॥ ೧ ॥ ಹೃದಯ ಸದನದಲ್ಲಿ । ಪದುಮನಾಭನ ಭಜಿಸಿ ॥ ಮುದಮನದಿಂದನಿತ್ಯ । ಸದಮಲ ರೂಪ ತಾಳಿ ॥ ೨ ॥ ದಾತಾ ಗುರು ಜಗ । ನ್ನಾಥವಿಠಲನ್ನ ॥ ಪ್ರೀತಿಯ ಪಡಿಸುತ । ದೂತರ ಪೊರೆಯುತ ॥ ೩ ॥ ಶ್ರೀಃ ॥

---

† ಕೋಸ್ಗಿ ಸ್ವಾಮಿ ರಾಯಾಚಾರ್ಯರಿಂದ ವಿರಚಿತವಾದದ್ದು.

### ೩. ರಾಗ ಸುರುಟಿ, ಆದಿತಾಳ.

ರಾಘವೇಂದ್ರ ಗುರುರಾಯಾ। ನೀ। ವೇಗದಿ ಪಿಡಿಯೆನ್ನ ಕೈಯ್ಯಾ॥ ಪ॥ ಆಗಮ ಸಂಚಿತ। ಭೋಗಗಳುಳ್ಳ ಭವ। ಸಾಗರದೊಳು ಬಿದ್ದ। ವೇಗದಿ ನೀ ಬಂದು ॥ ಅನುಪಲ್ಲ ॥ ಭಾವ ದ್ರವ್ಯಕ್ರಿಯದ್ವೈತಾ । ಇದರನು । ಭಾವವ ತಿಳಿಯದೆ ನಿರುತ ॥ ಸೇವಿಸಿ ಸಂತತ । ಈ ವಿಧ ನರರನು । ದೇವರೆಂದನುದಿನ । ಭಾವಿಸಿದೆನಾ ॥ ೧ ॥ ಅಶನವಸನಕಾಗಿ । ನಾ ಪರ । ವಶದಲಿ ತಿರಬಾಗಿ ॥ ಅಸಮ ನಿನ್ನಯ ಪದ । ಬಿಸಜ ಭಜಿಸದೆ। ವಸುಮತಿ ಯೊಳು ಬಲು । ಹಸನಗೆಟ್ಟೆನಾ ॥ ೨ ॥ ಶಿರಿವರ ಗುರು ಜಗನ್ನಾಥ । ವಿಠ ಲನ। ಪರಿಸರವರನಾಥಾ ॥ ಸರಿಯೆನಿಸಿದ ನಿನ್ನ । ಪರಿಸರರೊಳೆನ್ನ । ಮರಿಯದೆ ಚರರೊಳ್ । ಸರಿಯೆನಿಸ್ಯೆ ನೀ ॥ ೩ ॥ ಶ್ರೀಃ ॥

### ೪. ರಾಗ ಮೋಹನ, ಅಟತಾಳ.

ನಂಬೀ ಕೆಟ್ಟವರಿಲ್ಲವೊ। ಈ ಗುರುಗಳ। ನಂಬದೆ ಕೆಡುವರುಂಟೊ॥ ಪಲ್ಲ॥ ನಂಬಿದ ಜನರಿಗೆ। ಬೆಂಬಲ ತಾನಾಗಿ । ಹಂಬಲೀಸುವ ಫಲ। ತುಂಬೀ ಕೊಡುವರನ್ನ ॥ ಅನುಪಲ್ಲ ॥ ಜಲಧರ ದ್ವಿಜವರಗೆ । ತಾನೆ ವಲಿದು । ಸುಲಭ ಮುಕುತಿ ಯಿತ್ತನು । ಚೆಲುವ ಸುತನ ಪಡೆದ। ಲಲನೆಗೆ ತ್ವರ ದಿಂದ । ಪುಲಿನ ಗರ್ತದಿ ದಿವ್ಯ । ಜಲವನಿತ್ತಿಹರನ್ನ ॥ ೧ ॥ ಮೃತ್ಯು ಮೂತರು ತನ್ನನು। ನಂಬಿದ ನಿಜ। ಭೃತ್ಯನ್ನ ಕರದೊಯ್ಯಲು। ಸತ್ತ ದ್ವಿಜನ ತಾನು। ಮತ್ತೆ ಧರೆಗೆ ತಂದು। ಮೃತ್ಯು ಕಳದು ಸುಖ। ವಿತ್ತು ಪೊರೆದಿಹರನ್ನ ॥ ೨ ॥ ಧಿಟ ಗುರು ಜಗನ್ನಾಥ। ವಿಠಲನೊಲಿವ। ಘಟನಾವಾದದರಿಂದ ॥ ಘಟನಾ ಘಟನಾ ಕಾರ್ಯ । ಘಟನ ಮಾಡುವ ನಮ್ಮ। ಪಟುಗುರುವರರ ಹೃ। ತ್ಪುಟದೊಳಗಿಹರನ್ನ ॥ ೩ ॥ ಶ್ರೀಃ ॥

### ‡ ೫. ರಾಗ ಹರಿಕಲ್ಯಾಣಿ, ಆದಿತಾಳ.

ನಿರ್ವಿಘ್ನ ನೀಡೊ ನಭದೀಶ ॥ ಪಲ್ಲ ॥ ಗಜಮುಖ ಅಗಜೆಯಂ। ಗಜ ಮೃದ್ಭವ । ಗಜವರದನ ನಿಜದಾಸ ॥ ೧ ॥ ನಾಕಪವಂದ್ಯ ಪಿ । ನಾಕ

‡ ಅಸ್ಕಿಹಾಳ ಗೋವಿಂದದಾಸರ ಕೀರ್ತನೆಗಳು.

ಧರನ ಸುತ । ಏಕದಂತ ಧೃತಪಾಶ ॥ ೨ ॥ ಶಿರಿ ಗೋವಿಂದವಿಠಲನ ದಾಸರಿಗೆ । ಶಿರಿದನಿಖಿಳ ಭಯನಾಶ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೬. ರಾಗ ಕಾಂಬೋಧಿ. ಝಂಪೆತಾಳ.

ಕೇಶವನ ದಾಸರಿಗೆ । ಘಾಸಿಯುಂಟೆ । ವಾಸವನ ವಜ್ರಕ್ಕೆ ಗಿರಿನಿಕರದಂಜಿಕೆಯೆ ॥ ಪಲ್ಲ ॥ ಇದ್ದಲೀಯನುಗೊರಲೆ । ಮೊದ್ದು ಜೀವಿವುದುಂಟೆ । ಮದ್ದಾನೆಗಳಿಗಲ್ಪ ನರಿಯ ಭಯವೆ । ಅಬ್ಧಗಳು ಮರುತನೊಳು ಯುದ್ಧ ಬಯಸುವದುಂಟೆ । ಸಿದ್ಧರಿಗೆ ಭವಪಾಶ ಪದ್ಧತಿಗಳುಂಟೇ ॥ ೧ ॥ ಗುರು ಕೃಪೆಯ ಪಡೆದವಗೆ । ಪರಸೌಖ್ಯ ತಪ್ಪುವದೆ । ಹರಿಯ ಸ್ಮರಿಸುವ ನರಗೆ । ನರಕ ಭಯವೇ ॥ ಸರಿಗಟ್ಟಿ ವುರಗ ನಭ । ಚರಗೆದುರಿಲ್ಲಿಪ್ಪುದೆ । ನರ ಚಂಡಕರ ಕಂಡು । ಅರಳೀತೆ ಕುರು ಕುಮುದ ॥ ೨ ॥ ವಾರಿಧಿಗೆ ಮಳೆ ಭಯವೆ । ಮೇರುವಿಗೆ ಚಳಿಭಯವೆ । ಮಾರನ್ನ ಗೆದ್ದವಗೆ । ನಾರಿ ಭಯವೆ ॥ ತಾರಕ ಪ್ರಿಯ ಶಿರಿ ಗೋವಿಂದವಿಠಲನ । ಸೇರಿರುವ ಶೂರರಿಗೆ । ಯಾರ ಭಯವಯ್ಯ ॥ ೩ ॥ ಶ್ರೀಃ ॥

### ೭. ರಾಗ ಪೀಲು, ಆದಿತಾಳ.

(ಎಲೆ ಮನ ಮುರಾರಿಯನು ಕೊಂಡಾಡು)

ಬಿಡು ಮನ ಭವಾಖ್ಯ ಉರಗದ ಸಂಗ । ತಿಳಿ । ಮಡೀದು ಪೋಪದೀ ಅಂಗ ॥ ಪಲ್ಲ ॥ ಅಚ್ಯುತನಾಮವ । ನುಚ್ಚರಿಸದವನ । ಕಚ್ಚದೆ ಬಿಡದೀ ಭುಜಂಗ ॥ ೧ ॥ ವಿಷಮಯ ವಿಷಯಕೆ । ವಶನಾಗದೆ ಖಲು । ವಸುಧೆಯೊಳಿನಿಸು ನಿಸ್ಸಂಗ ॥ ೨ ॥ ಶಿರಿ ಗೋವಿಂದವಿಠಲನ ಸ್ಮರಿಸೆ ಹರಿ । ಪೊರೆಯೆ ತೆರಿವ ದಯಪಾಂಗ ॥ ೩ ॥ ಶ್ರೀಃ ॥

### ೮. ರಾಗ ಮಧ್ಯಮಾವತಿ, ಆದಿತಾಳ.

ನೀನಸ್ನಾ ಹೇಳ ಬಾರದೆನೆ ತಾಯಿ ॥ ಪಲ್ಲ ॥ ವಾನರ ವಂದಿತ । ಶ್ರೀನಿವಾಸಗೆ ಬುದ್ಧಿ ॥ ಅನುಪಲ್ಲ ॥ ಶ್ರೀನಿಧಿ ಪರನೆಂದು ನಂಬಿ ಬಂದ ಬಡ ।

ಪ್ರಾಣಿಯ ಪೊರೆಯೆಂದು ಜಾನಕಿದೇವಿಯ ॥ ೧ ॥ ಮೊರೆ ಹೊಕ್ಕವರ ಕರಪಿಡಿವೆನೆಂಬ ಘನ । ಬಿರುದು ಉಳಿಸಿಕೊಯಂ । ದ್ರುಪದಿ ಶಿರಿ ದೇವಿ ॥ ೨ ॥ ಉರಗಶಾಯಿ ಶಿರಿ ಗೋವಿಂದವಿಠಲ । ತುರಗಗ್ರೀವ ನರ ಹರಿಗೆ ತ್ವರಿತದೀ ॥ ೩ ॥ ಶ್ರೀಃ ॥

೯. ರಾಗ ಯದುಕುಲಕಾಂಬೋಧಿ, ಆದಿತಾಳ.

(ಮುದದಿ ಪಾಲಿಸೊ ಎಂಬಂತೆ)

ಮುದದಿ ಪಾಲಿಸೊ ಮುದತೀರಥರಾಯ । ಸದ್ಬುಧಜನಗೇಯಾ ॥ ಪಲ್ಲ ॥ ಪದುಮನಾಭ ಪದ । ಪದುಮ ಮಧುಪ ಸದಯ । ಪದವಿಲ ಶುಭ ಕಾಯ । ಅನುಪಲ್ಲ ॥ ಪದಗಿ ರಾಮ ಕಾರ್ಯದಿ ನೀ ಮನಸಿಟ್ಟೆ । ಲಂಕಾ ಪುರ ಮೆಟ್ಟೆ । ಹೆದರದೆ ದಿತಿಜರನೆಲ್ಲ ಕೊಂದು ಬಿಟ್ಟೆ । ಪುಚ್ಛದಿ ಪುರ ಸುಟ್ಟೆ ॥ ಕದನದಿ ಭೀಮವೃಕೋದರ ಜಗಜಟ್ಟಿ ಸನ್ಯಾಸತೊಟ್ಟೇ ॥ ೧ ॥ ಸೀತಾಶೋಕ ವಿನಾಶನ ಮಹಂತ । ಮಹಾಬಲಿ ಹನುಮಂತ । ವಾತಜ ವಾರಿಜ ಜಾತನಾಗುವಂಥ । ಖ್ಯಾತಿಯು ವುಳ್ಳಂಥ ॥ ಕೋತಿ ರೂಪಿ ಘರ್ಮಾನುಜ ಜಯವಂತ । ಯತಿನಾಥನೆ ಶಾಂತ ॥ ೨ ॥ ಶಿರಿ ಗೋವಿಂ ದವಿಠಲನ ಪ್ರೀತಿ ಕಂದ । ಭೀಮನೆ ಆನಂದ । ಗರಿದು ಮರಿದು ಪರಮ ತವನೆ ಆನಂದ । ಮುನಿ ರೂಪದಲಿಂದ ॥ ಶಿರಿ ರಾಮನ ಸುತನರ ಪ್ರಿಯ ಭರದಿಂದ । ಬದರಿಗೆ ನಡೆತಂದ ॥ ೩ ॥ ಶ್ರೀಃ ॥

೧೦. ರಾಗ ಪೂರ್ವಿ, ಆದಿತಾಳ.

(ವಿಠಲಯ್ಯ ಎಂಬಂತೆ)

ಪವಮಾನಾ । ಪವಮಾನಾ ॥ ತವನವಪದ ಪಲ್ಲವ । ಜವ ತೋರಿಸೊ । ಶ್ರೀಕರಕಪಿಪ ಪಿನಾಕ ಹಾಂಪದ । ಕೋಕನದ ಮಧುಪ ಕೃ । ಪಾಕರ ಗುರುವರ ॥ ೧ ॥ ಕ್ಷುಲ್ಲಕ ಮಲ್ಲಸು । ವಲ್ಲಣ ದ್ರೌಪದಿ । ವಲ್ಲಭ ಬಲ್ಲಿದ ಬಲ್ಲವ ರೂಪಿ ॥ ೨ ॥ ಯತಿಕುಲಪತಿ ದಿತಿ । ಸುತಮಥನನೆ ಕ್ಷಿತಿ । ಸುತೆ ಪತಿ ಕಥೆಯಲಿ । ರತಿನೀಡ್ಡಿತದಲಿ ॥ ೩ ॥ ಪ್ರೇಮದಿ ಕಾಮದ । ರಾಮನ ಕ್ಷೇಮವ । ಭೂಮಿಜೆಗರುಪಿದ । ವ್ಯೋಮ ಕೇಶನುತ ॥ ೪ ॥ ಸಾಮಜ

ಪುರಪತಿ । ತಾಮಸ ಕೌರವ । ಸ್ತೋಮ ವಳಿದ ಸು । ತ್ರಾಮಜ ಪ್ರಿಯ ನವೊ ॥ ೫ ॥ ಕ್ಷುದ್ರಾದ್ವೈತರ । ಸದ್ವಳಿದಾಮಲ । ಪದ್ಧತಿ ಗೈದ ಪ್ರ । ಸಿದ್ಧ ಮಧ್ವಮುನಿ ॥ ೬ ॥ ಸಿಂಧು ದಾಟಿ ಕುರು । ವೃಂದ ವಳಿದ ಕ । ರ್ಮಂದಿಯೆ ಶಿರಿ ಗೋ । ವಿಂದವಿಠಲಸುತ ॥ ೭ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧. ರಾಗ ಲಾವಣಿ.

**ಕೇ**ಳಿರಿ ಜನಗಳೆ ಬಾಳಿದಂಥ ವಿ । ಪ್ರಾಳಿಯ ತುಂಬಾ ಹೀನಸ್ಥಿತಿ ॥ ಕಾಲಕೆ ಸರಿಯಾಗಿ ಕೆಟ್ಟು ಹೋಯಿತು । ಮಾಲೋಲನ ಪಾದದ ಭಕುತಿ ॥ ಪಲ್ಲ ॥ ಹಿಂದಕೆ ಈ ಕುಲವೊಂದೆ ಮನದಿ ಗೋ । ವಿಂದನ ಮನವನು ವಲಿಸಿತ್ತು ॥ ದ್ವಂದ್ವಕವಾದ ಹರಿಗರ್ಪಿಸಿ ಬಲು ಆ । ನಂದದ ನಿಧಿಯೊಳು ಮುಳುಗಿತ್ತು ॥ ಮುಂದಾಗುವ ಸುಖದುಃಖವೆಲ್ಲ ದ್ವಿಜ । ವೃಂದಕ್ಕೆ ಗೊತ್ತಿರುತಿತ್ತು ॥ ಮಂದ ಓರ್ವದ್ವಿಜ ಬೇಕಾದರೆ ಶ್ರಮ । ದಿಂದ ಹುಡುಕಬೇಕಾಗಿತ್ತು ॥ ಓಣಿಓಣಿಗಳಲ್ಲಿ ತಿಳಿದ ಮಹಾ । ಜ್ಞಾನಿಗಳ ದರುಶನವಿತ್ತು ॥ ಮಾಣಿಕ್ಯದ ಸರ ಇವರಿಗಾಗಿ ಮಾ । ಶಾಣೆಗಿಂತ ಅಗ್ಗಾಗಿತ್ತು ॥ (ಇಳುವು) ಸುರಲೋಕ ತನಕ ಏರಿತ್ತು । ಧರೆಮ್ಯಾಲೆ ಈಗ ತಾ ಸಿತ್ತು ॥ ಜ್ಞಾನಾಖ್ಯ ಬಲವು ಅದಕಿತ್ತು । ಅದು ಈಗ ಹೋಯಿತು ಸತ್ತು ॥ ಇಷ್ಟಾದರು ಆಗದು ಗೊತ್ತು । ಗರ್ವದಿ ಉರಿವರು ಮತ್ತು ॥ (ಏರು) ಈ ಕುಲದವನಾನಾದ ಕಾರಣ ಎನ್ನಾಗೆ ಆಯಿತು । ವ್ಯಥಾ ಅತಿ ॥ ಕಾಲಕೆ ಸರಿಯಾಗಿ ॥ ೧ ॥ ತಂಡ ತಂಡದ ವೇದಶಾಸ್ತ್ರ ಕ । ಣ್ಗಂಡ ಪರಮ ಪವಿತ್ರಕುಲ ॥ ಪುಂಡರೀಕ ಲೋಚನನ ಪಾದ ಬಲ । ಗೊಂಡು ಮೆರೆದ ಉದ್ದಂಡ ಕುಲ ॥ ಚಂಡ ದಿತಿಜ ಶಿರ ಚಂಡಾಡಿದ ಕೋ । ದಂಡ ರಾಮಗತಿ ಪ್ರೀತಿಕುಲ । ಅಂಡೊಲಿಯದೆ ದುರುಳರಿಗೆ ವಂದಿಸದೆ । ಕೆಂಡದಂತೆ ಶುಚಿಯಾದ ಕುಲ ॥ ಅಂಡಜಾಂಸಗನ ಧ್ಯಾನಮಾಡುವಗೆ । ಗಂಡಸೆಂದು ಕರಿಯುವ ಕುಲ ॥ ಉಂಡು ಉಟ್ಟು ಸುಖದಿಂದ ಈ ಭೂ । ಮಂಡಲದೊಳು ಮೆರದಂಥ ಕುಲ ॥ (ಇಳುವು) ರಚಿಸಿದರು ಸಕಲ

ಶಾಸ್ತ್ರಗಳ । ಆವಾಗ ಇತ್ತು ಅತಿಬಲ ॥ ಅದು ಈಗ ಉಳಿಯಲೇ ಇಲ್ಲ
ಕಾಮ । ಕ್ರೋಧ ವಿಷಯ ಬಲು ಪ್ರಬಲ ॥ ವಾಗೇರಿತಿವರ ವೈಯೆಲ್ಲ ।
ಮುಸುಕಿತು ವಿಷಯದ ಜಾಲ ॥ (ಏರು) ಇಂಥವರ ಸ್ಥಿತಿಯೇನು
ಆಯಿತೆಂದು । ಚಿಂತೆ ಪಡುವದು ದಿವಿಜತತಿ ॥ ೨ ॥ ಅನ್ಯಾಯ ಮಾಡಲು
ಬಾರದು ಯೆಂಬರು । ಹೆಣ್ಣಿನ ಧನವನು ನುಂಗುವರು ॥ ಚಿನ್ನ ಮೂರು
ಸೇರು ಮಾತನಾಡಿ ಮೇಲೆ । ಕನ್ಯಾದಾನ ಫಲ ಬಯಸುವರು ॥ ಒಳಗೆ
ಕೂತುಕೊಂಡುಂಡು ಬಂದ । ಮೇಲೆ ಹರಿದಿನ ವ್ರತ ಶ್ರಮ ಬಹಳೆಂಬು
ವರು ॥ ಮಲಿನ ಮನಸಿನವರಾದರೂ ದೇಹ । ತೊಳೆಯಲಿಕ್ಕೆ ಘನ ಕಲಿ
ತಿಹರು ॥ ವಿಷ್ಣು ಭಕ್ತಿಯನು ಮಾಡದಿದ್ದರು । ವೈಷ್ಣವರೆಂದು ಕರೆಸು
ವರೂ ॥ ಇಟ್ಟು ಮೂತ್ರದ್ವಾರದಲಿ ಮನಸು ಮೇಲೆ । ವಿಟ್ಠಲ ವಿಟ್ಠಲ
ಯೆಂಬುವರು ॥ (ಇಳುವು) ಮಗ ಹುಟ್ಟಲು ಮನೆಯೊಳಘೋಷ । ಎದೆ
ಯುಬ್ಬಿ ನಡಿಯುವರು ಲೇಸಾ ॥ ಯೋಚಿಸದೆ ಕಾಲ ಕರ್ಮ ದೇಶ ।
ನಾಟಕ ನೋಡಲು ಉಲ್ಲಾಸ ॥ ಪರರನ್ನಕೆ ಪಡುವರು ಆಶಾ । ಹಗಲಿ
ರುಳು ದುರುಳರೊಳು ಸರಸ ॥ (ಏರು) ಪುನಹಾ ಮಧ್ವಮುನಿಯು ಜನಿ
ಸಿದರಸ್ಟ ॥ ಜನಿಸಿತೇನೈ ವಿಹಿತಮತಿ ॥ ೩ ॥ ದುರುಳ ಒಂದು ಕಾರ್ಯವ
ಗೈಯಲು । ಥರಥರನೆ ನಡುಗುತಿದ್ದಾ ಜನರು ॥ ಸರ್ವರಲ್ಲಿ ಸಮ ದೃಷ್ಟಿ
ಯಿಟ್ಟು । ನರಹರಿಯ ಕರುಣಪಡದಂಥವರ ॥ ತಂದೆ ವಿಷಯದ ಚಿಂತನೆ
ಮನದಲಿ । ನಿರುತ ನಾಮ ಧೇನಿಸುತಿಹರಾ ॥ ಹರಿಯೆ ಪರನೆಂಧರುಷ
ದಿಂದ ಡಂ । ಗುರಸಾರುತಲಿರುತಿಹರ ॥ ಗುರುಹಿರಿಯರಲಿ ಭಕ್ತಿಮಾಡಿ
ಮಹ । ಉರುತರ ಕೀರ್ತಿಯ ಪಡದವರ । ತರಳರು ಯೆಂದೂ ಕರೆಸಿದಾ
ಗ್ಯು ಘನ । ಕುರುಬರತೆರ ಇವರ ಆಚಾರ ॥ (ಇಳುವು) ಆಯಿತು ಕಾಲದೆಸೆ
ಯಿಂದ । ಈ ಕಲಿ ಕರ್ಮ ವಶದಿಂದ । ಹೋದವೂ ನಿಗಮಗಳ ವೃಂದಾ ।
ಈಗಿನಾ ದ್ವಿಜಾಲಯರಿಂದ ॥ ತಮ್ಮಯ ಕರ್ಮವೆ ಚಂದ । ನಿಜ ನಡತೆಗೆ
ಗೈವರು ನಿಂದಾ ॥ (ಏರು) ಹರಿನಾಮವ ಧಿಕ್ಕರಿಸಿದ ಕಾರಣ । ಸೇರಿತು
ಇವರೊಳು ಮಂದಮತಿ ॥ ೪ ॥ ಕಾಲದ ಮಹಿಮೆ ಕೇಳಿರಿ ಜನಗಳೆ ।
ಮೇಲಾದ ಪುರಾಣ ಪೇಳುವರು । ಬಾಲಸುಟ್ಟ ಬೆಕ್ಕಿನ ತೆರದಿ । ಬಿಡದ

ಊರೆಲ್ಲ ತಾವು ತಿರುಗುವರು ॥ ಮೇಲಕೆ ಕರೆಯುರು ಆದರು ಕಥೆ ದೇ ವಾಲಯದೊಳು ಶುರು ಮಾಡಿದರು । ಬಾಲಕೃಷ್ಣನ ಲೀಲೆ ಮನಸು ಗೊ । ಟ್ಟಾಲಿಸುವಂಥವರಿನ್ಯಾರು ॥ ರಾಜಕಾರ್ಯ ಆಸಕ್ತರು ರಾ ಯರು । ಮಾನಕಾಮಿಗಳು ಆಚಾರು ಗೂರಿನ ಮುದುಕರು ಪಿಂ ಛಿಣಿ । ಚೋರರು ಅಲ್ಲಿಂದಿಲ್ಲಿಗೆ ಅಮನವರು ॥ (ಇಳುವು) ಸಂಸಾರದಲ್ಲಿ ಬಲು ನೀಟಾ । ಯಾಚಕರ ಮುಂದೆ ಮಿಡಿ ಕ್ಯಾಟ । ವೇಶ್ಯರ ಮುಂದೆ ಬಲು ಮಾಟಾ । ಜರತರಿ ಧೋತರ ಕರಿಕೋಟೆ ॥ ದುಷ್ಕಾರ್ಯದೊಳು ಓಡ್ಯಾಟ । ವ್ಯಾಲೀನು ಬಹಳ ಆರ್ಭಾಟ । (ಏರು) ಒಳಗಿನ ಭೇದವು ತಿಳಿಯದೆ ಹೋದರು । ಬೆಳಗುಬೇಗು ದುರುಳರ ಸಂಗತಿ ॥ ೫ ॥ ಪುರಂ ದರಮೊದಲಾಧಿರಿಯ ದಾಸರಿಗೆ । ಕರಮುಗಿವದು ಕೆಲಕಾಲದೊಳು । ಸುರಾಂಶರಿವರೆಂದರಿದು ಧಿ । ಕ್ಕರಿಸುವರವರಾ ವಚನಗಳು ॥ ಅರ್ಥವ ನರಿಯದೆ ಆದರವಿಲ್ಲದೆ । ವ್ಯರ್ಥ ಪಠಿಸುವರು ಮಂತ್ರಗಳು । ಉತ್ತಮ ರಾವೆಂದರಿದು ನಿಂದಿಪರು । ಸೋತ್ತುಮರನ್ನ ಹಗಲಿರುಳು ॥ ನಿರ್ಮಲ ನಾಗಿಹ ದಾಸಕೂಟಕೆ । ದುರ್ಮತವೆಂಬುವ ನುಡಿಗಳು । ಸಮ್ಮಂಧಿಸಿ ತನ್ನೊಳಗೆ ತಾವೆ । ಆನಂದದಿ ಬಡಿವರು ಕರಗಳು ॥ (ಇಳುವು) ನಿಜ ಮಾತಿಗೆ ಆಗುವರು ಸಿಟ್ಟು । ಏನನ್ನ ಮಾಡಿ ಧನ ಕೊಟ್ಟು । ಮನ್ನಿಸಿ ಕೋಪವನು ಬಿಟ್ಟು । ಗೈವರು ಮಮತೆ ಮನವಿಟ್ಟು ॥ ಈಪರಿ ವಿಧಿ ಕುಲಕೆಟ್ಟು । ಹೋಯಿತು ಪೇಳಲಿನ್ನೆಷ್ಟು । (ಏರು) ದೂರಿನ ರಾಯರು ವಿಪ್ರರ ಮನೆಗೆ ಬಂದಿರೆ ಬ್ಯಾರಾದಿನ ರೀತಿ ॥ ೬ ॥ ಪದ್ಮನಾದರೂ ದುಡ್ಡು ಇದ್ದವನೆ । ದೊಡ್ಡವನೆನಿಸಿದ ಜಗದೊಳಗೆ । ಪಶುಗಳಂತೆ ದುರ್ವಿಷಯದಲಿಪ್ಪನೆ । ರಸಿಕನಾದ ವಸುಧೆಯೊಳಗೆ ॥ ಬರಿ ತಲೆಯಿಂ ದಲಿ ತಿರುಗುವರೆಲ್ಲರು । ಧರೆಸುರರೆನಿಸಿ ಧರೆಯೊಳಗೆ । ಕರೆಸಿಕೊಂಬರು ಪಂಡಿತರೆಂದು । ಜರತಾರಿ ಶಾಲ್ಯಾವರ ಜನರಾಗೆ ॥ ನಾರಿಯ ಕುಚವನು ವರ್ಣಿಸುವನು ಸಹ ಕವಿ । ಸೂರಿ ಯೆನಿಸಿದ ಜಗದೊಳಗೆ । ಪತಿಯು ಬಿಟ್ಟು ವ್ರತವ ಗೈವಳು । ಅತಿ ಯೋಗ್ಯಳು ವಸುಮತಿಯೊಳಗೆ ॥ (ಇಳುವು) ಬಿಟ್ಟರೂ ಬಹಳರೂ ಕರ್ಮಾ ಮುಖ । ಕಷ್ಟದ ಮೋ ಬಲು

ಪ್ರೇಮ । ಬಿಸುಟಲು ತಿಥಿ ವ್ರತನೇಮ । ಅದು ಪೋಗಿ ಸೇರಿತು ವ್ಯೋಮ ॥ ಇವರನ್ನ ಮರತನೆ ರಾಮ । ಪೊರೆಯದೆ ಸತತ ಸುಖ ಧಾಮ ॥ (ಏರು) ಇಂಥ ಪಾಪ ಗುಣವಂತರ ತಾನು । ಎಂತು ಧರಿಸಿಹಳೋ ಏನು ಕ್ಷಿತಿ ॥ ॥ ೭ ॥ ಎಲ್ಲ ಜನರು ಇಟ್ಟರು ಮನ ಧನ । ದಲ್ಲಿ ಪೂರ್ಣಸಂಬಿಕೆಯಾಗಿ । ಕ್ಷುಲ್ಲಕರ ಸೇವೆಯಾದರೂ । ಒಲ್ಲೆವೆನರು ಧನಸಲುವಾಗಿ ॥ ಖುಲ್ಲ ಓರ್ವ ನರನಲ್ಲಿ ಧನವು ಯಿರೆ । ಮೆಲ್ಲನೆ ತಾವಲ್ಲಿಗೆ ಪೋಗಿ । ಹಲ್ಲು ಕಿಸಿದು ಪಾದುಕಾ ಬಿಡುವ ಸ್ಥಳ । ದಲ್ಲಿ ನಿಲ್ಲುವರು ತಲೆಬಾಗಿ ॥ ಎಲ್ಲಿ ಯಿಲ್ಲವೂ ನಿನ್ನಯ ಸರಿ ಧರೆ । ಯೆಲ್ಲವು ಪುಡುಕಿದರು ಲೇಸಾಗಿ । ಬಲ್ಲದಾಸಿ ನೀನಾದ ಕಾರಣ । ನೀನೆವೇ ಸ್ವರ್ಗದ ಭೋಗಿ ॥ (ಇಳುವು) ಹೀಗೆನುತ ಸ್ತೋತ್ರ ಗೈದವನ । ಮನೆಯೊಳಗೆ ಪೋಗುತಲಿ ನಾನಾ । ದಾಸ್ಯವನು ಗೈದು ಪ್ರತಿದಿನ । ಮಾಡುವರು ದ್ರವ್ಯ ಆರ್ಜನ ॥ ಎತ್ತುವರು ಅವರ ಅಣುಗರನ । ತೊರೆದರೊ ತಮ್ಮ ಅಭಿಮಾನಾ । (ಏರು) ದಯಾ ಧರ್ಮ ಗಳು ದೂರ ಹೋದವು । ನೀಚ ಕರ್ಮದೊಳಗತಿರತಿ ॥ ೮ ॥ ವೇಸ ಗಾರರ ಮಹಿಮೆ ಪೇಳುವೆ । ಬ್ಯಾಸರ ಬಡದಲೆ ಕೇಳಿರಿ । ಗ್ರಾಸ ದೊಡೆ ಯದಿರೆ ಘಾಸಿಗೊಂಡು ಹರಿ । ದಾಸರ ತೆರ ವೇಷವು ಧಾರಿ ॥ ಯಾಗಿ ಪರಮ ವೈರಾಗಿಗಳಂದದಿ । ಕೂಗಿ ಕಣ್ಣು ಮುಚ್ಚುತ ಚೀರಿ । ಸಾಗಿ ಬಾರೊ ಭವರೋಗಹರನೆ ಯೆಂ । ದಾಗಸ ಕಡೆಮಾಡಿ ತಮ್ಮ ವೋರಿ ॥ ಚಿತ್ರಚಿತ್ರದ ಪದಗಳ ಪಾಡುವರು । ಉತ್ತಮ ಸ್ವರದ ತಂಬೂರಿ । ತಥೈ ಎಂದು ಕುಣಿವರು ಕಾಣದೆ । ಚಿತ್ತಜನಯ್ಯನ ಪುರದಾರಿ ॥ (ಇಳು ವು) ದಿನ ದಿನ ತಿರುಗುವದು ಒಂದು । ಮನೆ ಬಿಡದೆ ಧಾನ್ಯ ಧನ ತಂದು । ಮನಸಾರ ಕೂತುಕೊಂಡು ತಿಂದು । ಅತಿಥಿಗೆ ಪೇಳ್ವರು ಇಲ್ಲೆಂದು ॥ ದಾನಾಖ್ಯ ಕರ್ಮವನೆ ಕೊಂದು । ತಿಳಿದರೊ ಧರ್ಮ ಇದು ಯೆಂದು । (ಏರು) ವೇಷಪೊಂದೇ ಧರಿಸಿದ ಮಾತ್ರದಿ । ಪೋಷಿಸನೇನ್ಯೆ ಕೃತಿಪತಿ ॥ ॥ ೯ ॥ ಇಷ್ಟೆ ಅಲ್ಲ ದ್ವಿಜ ಸತಿಯರು ಸಹವಾಗಿ । ಕೆಟ್ಟರು ಪೇಳಲಿ ಇನ್ನೇ ನು । ಎಷ್ಟು ಕಷ್ಟ ತಮ್ಮ ಪತಿಗೆ ಬಂದರೂ । ಕಟ್ಟಾಣಿ ಬಯಸುವರೊಂ ಕಿಯನು ॥ ಬಿಟ್ಟರು ಶಾಸ್ತ್ರದಿ ಪೇಳಿದ ಮಹ ಇು । ತ್ರಷ್ಟವಾದ ಗದ

ತಿಲಕವನು । ಇಟ್ಟಾಕ್ಷಣಕೆ ವಸ್ತು ವಡವೆಗಳು । ಸೊಟ್ಟು ಮಾಡುವರು ತಮ್ಮ ಗೋಣು ॥ ವಿಟ್ಠಲನೆಂದರೆ ಏಂನೆಂದು ಕೇಳ್ವರು । ಮುಟ್ಟಲೊಳ್ಲರ್‍ರಿ ಪಾದವನು । ಪೆಟ್ಟಿ ಪೆಟ್ಟಿಗೆ ಮಕ್ಕಳ ಬಡಿವರು । ಬಿಟ್ಟರು ಕೆಲವರು ಪತಿಯನ್ನೂ ॥ (ಇಳುವು) ಮರಣಕ್ಕೆ ಮಾತ್ರ ಅಂಜುವರು ಬಡ । ಗಂಡನ ಮಾತಾಡಿಸರೂ । ಕನ್ನಡಿಯು ನೋಡುವಾಗವರು । ರತಿತಾವೆ ಯೆಂದು ತಿಳಿಯುವರು ॥ ಕಣ್ಣು ಬ್ಬು ಹಾರಿಸುತಿಹರು । ಅನ್ಯರಲಿ ಮನಸು ಇಟ್ಟಿಹರು ॥ (ಏರು) ಶತ ಸಂಖ್ಯಕೆ ಓರ್ವಳೆ ದೊರೆವಳು । ಪತಿ ಭಕುತಿಯ ಮಾಡುವ ಸತೀ ॥ ೧೦ ॥ ಎಲ್ಲರಿಗೀ ಪದದಲ್ಲಿಹ ನುಡಿಗಳು । ಸಲ್ಲವು ಕೇವಲ ಮೂರ್ಖರಿಗೆ । ಎಳ್ಳಷ್ಟಾದರು ಅರಿವು ಬರಲೆಂ । ದುಲ್ಲಾಸದಿ ಮಾಡಿದೆ ಹೀಗೆ ॥ ಕಲಿಕೃತ ಮಾಯದ ಬಲೆಯೊಳು ಬೀಳದೆ । ನಿಲಿಸಲಿ ಮನ ಹರಿಪದದಾಗೆ । ಜಲಜನಾಭನು ನಿತ್ಯನಿತ್ಯದಿ । ನೆಲಸಲಿ ಬ್ರಾಹ್ಮಣ ಕುಲದಾಗೆ ॥ ಎಲರುದೇವನ ಮತಕನುದಿನ ಮಂ । ಗಳವಾಗಲಿ ತಪ್ಪದ ಹಾಗೆ । ನೆಲೆಯಿಲ್ಲದ ಸುಖ ಜಲನಿಧಿ ನಿತ್ಯದಿ । ನಿಲಿಸಲಿ ಇಳೆ ಸುರರೆದೆಯಾಗೆ ॥ (ಇಳುವು) ಎಂತೆಂಬ ಒಳ್ಳೆ ಮತಿಯಿಂದಾ । ಬಯಸದೆ ಕೀರ್ತಿ ಮನದಿಂದಾ । ಈ ಪದ ಮಾಡಿದ ಅಂದಾ । ತಿಳಕೊಂಡು ಬಡವರಾನಂದ ॥ ನಿಷ್ಕಲುಷರಾದ ಬುಧರೆಂದ । ಹರಿದಾಸನಾದ ಗೋವಿಂದ ॥ (ಏರು) ಗೈದನು ಪದಗುರು ವೇದತೀರ್ಥ ಮತ । ಮೇದಿನಿಯೊಳಘೆಚ್ಚುವ ರೀತಿ ॥ ೧೧ ॥ ಶ್ರೀಃ ॥

## ೧೨. ಯಮಕ.

ಮಾವಾರಿ ಮಾವಾರಿಜಜರಮನಕತಿ ದೂರ । ಯಶೋದಜ ಯಶೋದಜಯುವ ನೀಯೋ ॥ ೧ ॥ ಜಂಭಾರಿಜಂಭಾರಿ ದುಃಖ ಬಡೆ । ನೀ ಪೇಳ್ದಿ ಕುರುಪಂಥ ಕುರುಪಂಥ ರಥರಿಪಂತೆ ॥ ೨ ॥ ನಗಪ ಪನ್ನಗಪ ಪಂಚಾಸ್ಯನುತಕಾಯೋ । ಗೋಪಾಲಗೋಪಾ ಲವನ ತಂದೆಯೋ ॥ ೩ ॥

ಮಾವಾರಿ=ಕಂಸವೈರಿ, ಮಾ=ಲಕ್ಷ್ಮಿ, ವಾರಿಜಜ=ಬ್ರಹ್ಮ, ಯಶೋದಜ=ಕೃಷ್ಣ, ಯಶಃ=ಕೀರ್ತಿ, ದ=ಕೊಡತಕ್ಕವ, ಜಂಭಾರಿಜಂ-ಅರ್ಜುನ, ಕುರುಪಂಥರ=ಕೌರವಾದಿಗಳ, ನಗಪ-ಶೇಷಾದ್ರಿವಾಸ, ಪನ್ನಗಪ-ಶೇಷ, ಪಂಚಾಸ್ಯ=ರುದ್ರ.

೧೩. ರಾಗ ಮಧ್ಯಮಾವತಿ. ಅಟತಾಳ.

ನೆನೆ ಮನ ಅನುದಿನದಿ । ಅನುಮಾನಿಸದೆ ॥ ಪಲ್ಲ ॥ ನೆನೆ ಮನವೆ ಶ್ರೀ ಸತ್ಯಧ್ಯಾನರ । ಅನಘ ಹೃದ್ವನಜದೊಳು ಘನ । ದಿನ ಮಣಿಯ ಪೋಲ್ ಮಿನಗುವನ ಗುಣಗಣ । ತನುಮರಿದು ಕುಣಿಕುಣಿದು ಹರುಷದಿ ॥ ॥ ಅನುಪಲ್ಲ ॥ ಜ್ಞಾನಾತ್ಮಪರನೆಂದು । ಮಿಕ್ಕಾದಿತೇಯರು । ಊನರು ಹರಿಗೆಂದು । ಚೇತನರು ಇವನಾ । ಧೀನರು ಅಹುದೆಂದು ॥ ವಿಸ್ತರಿಸಿ ಪೇಳಿದ । ದೀನಪಾಲಕ ದೇವ ಶ್ರೀಪವ । ಮಾನ ಮತ ಅಂಬುಧಿಯೊಳ ಸುದಿನ । ಮಿಾಸನೆನಿಸಿದ ನಮ್ಮ ಸತ್ಯಜ್ಞಾನತೀರ್ಥರ ಮಾನದಾಂ ಘ್ರಿಯು ॥ ೧ ॥ ಕಮಲಾಪ್ತಗಧಿಕವಾದ । ತೇಜದಲಿ ಪೊಳೆಯುವ । ಕಮಲಾಪತಿಯ ಸುಪಾದ । ಅತಿ ವಿಮಲತನ ಹೃತ್ । ಕಮಲದೊಳಿಟ್ಟ ಪದ ॥ ಭಯ ಹಾರಿಕರದ್ವಯು । ಕಮಲದಿಂ ಸೇವಿಸುತ ಮಾಯ್ಕುಳ । ಕಮಲ ಚಂದಿರನೆನಿಸಿ ಸಜ್ಜನ । ಕಮಲ ಮಹಿಮೆಯು ತೋರ್ದ ಗುರು ತಮ । ಕಮಲ ಸಂಭವಪಿತನ ಪೋತನ ॥ ೨ ॥ ಇಂದ್ರಲೋಕವ ತೊರ ಮು । ಕೆಲಕಾಲ ತಾರಾ । ಕೇಂದ್ರನೊಲ್ ಭುವಿಗಿಳಿದು । ಸಜ್ಜನರ ಪೊರಿವದ । ಕಿಂದ್ರಿಯಂಗಳ ಗೆಲಿದು ಸನ್ಯಾಸಗೊಂಡು ॥ ಇಂದ್ರ ಅರಿಹರ ಕೀತ ರಘುಕುಲ । ಇಂದ್ರನಾದ ಉಪೇಂದ್ರ ಶಿರಿ ಗೋ । ವಿಂದವಿಠಲನ ಭಜಿಸಿ ರಾಜ ಮ । ಹೇಂದ್ರಿಯಲಿ ತನುವಿಟ್ಟ ಗುರು ಪದ ॥ ೩ ॥

೧೪. ರಾಗ ತಾಳ.

ನೀನೇನು ಬಲ್ಲಿ । ಮಹಿಮಾ ॥ ನಿರುಪಮ ನಿರ್ಗುಣ ಮೂರುತಿಯ ॥ ॥ ಪಲ್ಲ ॥ ಮಿಾನಾಕಮಠ ಕ್ರೋಡನಾದ ನರಹರಿ ವಾಮನನಾ ॥ ಅನು ಪಲ್ಲ ॥ ತಾಯಿ ಶಿರವ ತರಿದನೊ ಮಲ । ತಾಯಿ ಹಟವ ಪೂರೈಸಿದನೊ ॥ ತಾಯಿ ಸಹೋದರನನ್ನು ಮಡುಹಿದ । ಮಾಯಾಮೋಹನನಾ ॥ ೧ ॥ ಮೂರು ಪುರದ ನಾರಿಯರ ಸ್ಮರ । ನಾರಾಚಕ್ಕೆ ಗುರಿಯು ಮಾಡಿ । ಏರಿ ತುರಗ ಅಸುರನಿಕರ । ಸೂರೆಗೈದನಾ ॥ ೨ ॥ ತಾನೇ ಜಗವ ಸೃಜಿಸಿ ವಹಿಸಿ । ಮಾಣದೆ ಸಂಹರಿಸಿ ಪಾಪಾ ॥ ಏನು ಅರಿಯದಂತೆ ನಲಿವ ಶ್ರೀನರಸಿಂಹನ ॥ ೩ ॥

ಶ್ರೀಃ ॥

### ೧೫. ರಾಗ ಕಾಫಿ, ಅಟತಾಳ.

ಅಂಬುಜಾಕ್ಷಿ ಸ್ತಂಭದಿಹರ್ಯಾರೆ । ಯಾರೆ । ಸಾರೆ ॥ ಪಲ್ಲ ॥ ನಂಬಿದಾ ಭಕತರ ಮನ । ದ್ಹಂಬಲವ ನೀಡುವರೆ । ಅನುಪಲ್ಲ ॥ ಸುರರೊಡೆಯು ನೋಲ್ ಪರಿಪರಿಯಲ್ಲೈ । ಶ್ವರ್ಯದಿಂ ರಾಜಿಸುವರ್ಯಾರೆ । ಹರಿಕಥಾಮೃತ ಗ್ರಂಥ ವಿರಚಿಸಿ । ಧರಣಿಸುರರುದ್ಧರಿಸಿದವರೆ ॥ ೧ ॥ ಫುಲ್ಲಲೋಚನೆ ಬಲ್ಲಿಯಾ ಇವ । ರಿಲ್ಲಿರುವ ಕಾರಣವಿದೇನೆ । ಫುಲ್ಲನಾಭನ ಪುಡುಕಲೀ ಪ್ರ । ಹ್ಲಾದನನುಜ ಸಹ್ಲಾದರಿವರೆ ॥ ೨ ॥ ಜಲಜ ತುಲಸಿಮಣಿ ಸುಮಾ ಲಿಕೆ । ಗಳದಿ ಧರಿಸಿಹರ್ಯಾರೆನೀರೆ ॥ ಕಲಿಯುಗದಿ ಕಮಲಾಪತಿ ವಿ । ಠಲನ ವಲಿಸಿಳೆಯೊಳಗೆ ಮೆರೆವರೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೬. ರಾಗ ಪೀಲು, ಆದಿತಾಳ.

ಎಂದಿಗೆ ನಿನ್ನ ಪಾದ ಕಾಂಬೆ । ರಂಗ ॥ ಪಲ್ಲ ॥ ಎಂದಿಗೆ ನಿನ್ನ ಪಾದ ಕಂಡೇ ಭಕುತಿಯಿಂದ । ಅಂದಿಗೆ ಭವಪಾಶ ತುಂಡೆ ॥ ಅನುಪಲ್ಲ ॥ ಇಂದಿರೆದೇವಿ ನಿನ್ನ । ಪೊಂದಿದ ಕಾರಣ । ದ್ವಂದ್ವಾಘವನೆ ಕಾಣಲಿಲ್ಲ ॥ ೧ ॥ ಬೊಮ್ಮನು ನಿನ್ನ ಮಗ । ನಮ್ಮಿತ್ತುತಿಸುವಾಗ । ಪೊಮ್ಮಗ ಕುಣಿಕುಣಿದಾಡುವ ॥ ೨ ॥ ನಿನ್ನನೇ ವಾಸುದೇವವಿಠಲ । ಯೆನ್ನ ಮನ್ನದಿ ಭಜಿಸೋದು ಬಲ್ಲೈಲಾ ॥ ೩ ॥ ಶ್ರೀಃ ॥

### ೧೭. ರಾಗ ಆನಂದಭೈರವಿ, ಏಕತಾಳ.

ಪವನ ಸಂಭೂತ ವಲಿದು । ತವಕದಿ ಕಾಯುಬೇಕು ॥ ಇವನಾರು ಯೆಂದುದಾಶನ । ಮಾಡದಲೆ ಯೆನ್ನ ॥ ಪಲ್ಲ ॥ ಕಪಿಪ ಕಪಿ ಆಜ್ಞಾವಂತೆ । ಕಪಿಲನ್ನ ಪತ್ನಿಯನ್ನು । ಕಪಿಗಳು ಪುಡುಕಿ ಮಿಡುಕಲು । ಕಾಯ್ದೆ ಆಗಲು ॥ ೧ ॥ ಅಜಸುತನ ಶಾಪದಿಂದ । ಅಜಗರನಾದವನ ಪಾದ । ರಜದಿ ಪುನೀತನ ಮಾಡಿದನೆ । ಅಜಪದವಿಗೆ ಬಹನೆ ॥ ೨ ॥ ಕಲಿಯುಗದಿ ಕವಿಗಳೆಲ್ಲ । ಕಲಿಯ ಬಾಧೆಗೆ ಬಳಲೆ । ಕಲಿ ವೈರಿ ಮುನಿ

ಯೆಂದೆನಿಸಿದಿ । ಕಲಿ ಮಲವ ಕಳದಿ ॥ ೩ ॥ ಹರಿವೇಷಾಧರನೆ ನರ ಹರಿ ಭಕತರ ಪೊರೆಯುವದಕ್ಕೆ । ಹರಿಯಂತೆ ಬಂದೊದಗುವಿ ನೀನು । ಹರಿದಾಸನು ನಾನು ॥ ೪ ॥ ಗುರು ಪ್ರಾಣೇಶವಿಠಲ । ಗುರುವರ ನೆಂಬೋ ಜ್ಞಾನ । ಗುರು ಮಧ್ವರೇಯಾ ಕರುಣಿಸೊ । ದುರ್ಮತಿಗಳ ಬಿಡಿಸೊ ॥ ೫ ॥ ಶ್ರೀಃ ॥

## ೧೮. ರಾಗ ದೇವಗಾಂಧಾರ. ಆದಿತಾಳ.

ಹೇ ದಯಾಬ್ಧಿ ಪಾಲಿಸೆನ್ನ । ಶ್ರೀದ ಹನುಮಂತ ॥ ಪಲ್ಲ ॥ ಭೂಧವ ಜನದಿಯಲ್ಲಿ ನಿಂತ । ಕಾಳಿಕಾಂತ ವೀತಚಿಂತ ॥ ಅನುಪಲ್ಲ ॥ ರಾವಣಾನು ಜನಂತೆ ಮತ್ತೆ ಶೈಲಸುತನಂತೆ । ದೇವತೆಗಳ ನಾಥನಂತೆ । ದೇವತೆಗ ಳಂತೆ ॥ ಆವ ವಿಕ್ರಮ ಪಾರ್ಥನಂತೆ । ಕಾದಿ ಬಿದ್ದ ಕಪಿಕುಲದಂತೆ । ತಾವರೆ ಸಖಸೂರ್ಯನಂತೆ । ತತ್ಸುತ ಸುಗ್ರೀವನಂತೆ ॥ ೧ ॥ ಭೂವರಾ ಧಿಪ ಧರ್ಮನಂತೆ ದ್ರೌಪದಿಯಂತೆ । ಭೂಮಿ ಬುಧಸುತನಂತೆ । ರಾಕ್ಷಸಿ ಯಂತೆ ಫಣಿಯಂತೆ ॥ ಆ ವಿರಾಟರಾಯನಂತೆ ಪಾರ್ವತಿಯ ನಾಥನಂತೆ । ನೀವಿಜಯನಾಗಲು ಸಹಿಸದೆ । ಕೋಪಿಸಿದ ಧೃತರಾಷ್ಟ್ರನಂತೆ ॥ ೨ ॥ ಮೋದದಿಂದ ನಿನ್ನ ಪಡೆದ ಮಧ್ಯಗೇಹನಂತೆ । ಸಾದರದಿ ಹರಿಪೂಜ ಮಾಳ್ಪ । ಸೂರಿ ಜನರಂತೆ ॥ ಆ ದಿನಾ ಕಡಲಲ್ಲಿ ಮುಳುಗಿ ಪೋಗು ತಿದ್ದ ನಾವೆಯಂತೆ । ಪಾದ ಹಿಡಿದ ಕಾಳಿ ಸರ್ಪನ ಕಾಯ್ದ । ಪ್ರಾಣೇಶ ವಿಠಲನಂತೆ ॥ ೩ ॥ ಶ್ರೀಃ ॥

## ೧೯. ರಾಗ ಪೂರ್ವಿ. ಮಟ್ಟಿತಾಳ.

ಮಂಗಳಂ ಜಯ ಮಂಗಳಂ । ಮಂಗಳ ಶ್ರೀಗುರು ರಾಘವೇಂದ್ರರಿಗೆ ॥ ॥ ಪಲ್ಲ ॥ ಕೋಲಜಕೂಲ ವಿಶಾಲ ಮಂತ್ರ ಮಂದಿ । ರಾಲಯ ಪಾಲಯ ಪಾಲಯ ಮಾಂಗುರು ॥ ೧ ॥ ನಾಭಿಜ ನಾಭಿಜ ನಾಭಿಜ ಪದಕಂಜ । ಶೋಭಿತ ಕೆಳೆ ಬಿಡದಮ್ಮ ನಾಳೆ ॥ ೨ ॥ ಏನೇನು ಮಾಡಲು ನೀನೊಲಿ ಯದೆಂದು । ಪ್ರಾಣೇಶವಿಠಲನ್ನ ಕಾಣರು ಜನರು ॥ ೩ ॥ ಶ್ರೀಃ ॥

## ೨೦. ರಾಗ ಹರಿಕಲ್ಯಾಣಿ, ಏಕತಾಳ.

ಇದನೆ ಪಾಲಿಸೊ ದೇವಾ । ಯುನ । ಗಿದನೆ ಪಾಲಿಸೊ ದೇವಾ ॥ ಪಲ್ಲ ॥ ಇದನೆ ಪಾಲಿಸೊ ಯಾದವ ಪತಿಯೆ । ಪದೇ ಪದೆಗೆ ನಿನ್ನ ಸ್ಮೃತಿಯ ॥ ॥ ಅನುಪಲ್ಲ ॥ ಎಲ್ಲಿ ಯುನ್ನಮನ ಯೆರಗಿತೊ ದೇವಾ । ಅಲ್ಲಿ ನಿನ್ನ ತಿಳಿವ ಭಾವ ॥ ೧ ॥ ಮುಕ್ತಿಗೆ ಸತ್ಪಥ ದೃಢಸೊಪಾನ । ತ್ವತ್ಕಥಾಮೃತದ ಪಾನ ॥ ॥ ೨ ॥ ಜನ್ಮಜನ್ಮದಿ ವೇದವ್ಯಾಸಾ । ನಿನ್ನ ದಾಸ ಸಹ ವಾಸಾ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೧. ರಾಗ ಬೇಹಾಗ್, ಏಕತಾಳ.

ವೃಥಾ ಭವದಿ ಮೆರದಿ । ಹೆ ಮನುಜ ॥ ಪಲ್ಲ ॥ ರಥಚರಣಧರನ ಸ್ಮೃತಿಯನೆ ಮರದಿ ॥ ಅನುಪಲ್ಲ ॥ ಸತಿಸುತರೆನ್ನಯ । ರತಿಶಯ ಗೃಹ ಧನ । ಪತಿಯು ನಾನೆಂಬ ಮಮತೆವಿಡಿದು । ರತಿಪತಿ ಪಿತನಂಘ್ರಿ । ರತಿವೇಶವಿಲ್ಲದೆ । ಸತತ ಯಮಪುರದ ಪಥವನೆ ಪಿಡಿದಿ ॥ ೧ ॥ ಅತಿಥಿಗ ಳೊಲ್ಲದೆ । ಯತಿ ಪೂಜೆಯಿಲ್ಲದೆ । ಪುತಿಮಲ ಭಾಂಡ ಭರಿತನಾಗಿ ॥ ಚತು ರ್ಮುಖನೈಯನ । ವ್ರತವ ಬಿಸಟು ಅನ್ಯ । ಪತಿತ ಮಾರ್ಗವ ಪೊಂದಿ । ಹತಭಾಗ್ಯನಾದಿ ॥ ೨ ॥ ಮಿತ ಮನರಹಿತ ದು । ರ್ಮತಿ ಪಂಡಿತನಾಗಿ । ಪ್ರತಿ ಬೊಮ್ಮ ರಕ್ಕಸೊನ್ನತ ನೆನಿಸಿ । ಅತಿ ಪ್ರಜ್ಞ ಶಾಸ್ತ್ರ ದೇ । ವತೆ ಪ್ರಸನ್ನೆಂಕಟ । ಪತಿಯನೆ ಬಿಟ್ಟನ್ನಿತರನ ನೆನದಿ ॥ ೩ ॥ ಶ್ರೀಃ ॥

## ೨೨. ರಾಗ ನವರೋಜು, ಏಕತಾಳ.

ಮಾರುತನ್ನ ಜಾಯೆ । ಮೊರೆಯ ಹೊಕ್ಕೆನು ತಾಯೆ ॥ ಪಲ್ಲ ॥ ಮಾ ರಾಂತಕ ಶಂಬರಾರಿಭ । ದುರಧರ ತಾರೇಶಾರವಿನುತೆ ಅಮ್ಮಯ್ಯ ॥ ಅನು ಪಲ್ಲ ॥ ಭ್ರಮರಕುಂತಳೆ ಜಾಣೆ । ತಾಯೆ । ಅಮರವಂದಿತಚರಣೆ ॥ ಸುಮನಸೇಶನ ಪದ । ಕಮಲ ಭಜಿಪದಕೆ । ವಿಮಲ ಭಕುತಿ ನೀಡೆ । ಅಮ್ಮಯ್ಯ ॥ ೧ ॥ ಕೃತಿಯಾ ದೇವಿಯುರಲ್ಲಿ । ನೀ । ಸುತಳಾಗಿ ಜನಿಸಿದೆ । ಸತತ ಯೆನ್ನನು ದುರ್ಮತಿಯು ಖಂಡಿಸಿ ನೀ । ಮತಿವಂತನ ಮಾಡೆ ।

ಅಮ್ಮಯ್ಯ ॥ ೨ ॥ ಈರೇಳು ಭುವನವ । ತಾಯೆ । ಜಠರದೊಳಿಂಬಿಟ್ಟ ಪರಿಪೂರ್ಣ ಕಾಮ ಶ್ರೀಮೋಹನ್ನವಿಠಲನ್ನ । ಚರಣಭಕುತಿ ನೀಡೆ॥ ೩

೨೩. ರಾಗ ಸೌರಾಷ್ಟ್ರ, ಮಟ್ಟತಾಳ.

ಶ್ರೀನಾಥನ ನಾಮಾಮೃತ ರುಚಿಕರ । ಜ್ಞಾನಿಗಳಿಗಲ್ಲದೆ । ಹೀನ ಮಾನವನು ತಾ ಕೇಳಿ ಹಿರ್ರನೆ ಹಿಗ್ಗಿ । ಆನಂದ ಬಡಬಲ್ಲನೇ ॥ ಪಲ್ಲ ॥ ಕ್ಷೀರವಾರಿಯು ಕೂಟ । ಮರಾಳತಿಳಿದಂತೆ । ನಿರುಕೋಳಿ ಬಲ್ಲದೆ । ಸಾರಾಮೆಯನ ಬಾಲಾಲಳಿಗಿಯೊಳಿಟ್ಟರೆ । ನೆರವಾಗ ಬಲ್ಲದೆ ॥ ೧ ॥ ದಾರುಪ್ರತಿಮೆಗೆ ಶೀರಿಯನುಡಿಸಲು । ನಾರಿಯಾಗ ಬಲ್ಲದೆ । ಭಾರತಿ ಪತಿಪಾದ । ಅರಿಯದ ಮನುಜನು । ನಾರಾಯಣನ ಬಲ್ಲನೆ ॥ ೨ ॥ ಕನ್ನಡಿಯೊಳು ರೂಪ ಹೊಳದಂತೆ । ಹಂಚಿನೊಳಿನ್ನು । ಕಾಣಿಸ ಬಲ್ಲದೆ । ಕಣ್ಣಿಲ್ಲದವನಿಗೆ ಚಿನ್ನವ ತೋರಲು । ಬಣ್ಣಾ ಹೇಳಬಲ್ಲನೆ ॥ ೩ ॥ ಉದರಕ್ಕೆ ಗ್ರಾಸವನಡಿಸದ ನರನು ತಾ । ಮದುವೆ ಮಾಡಬಲ್ಲನೆ । ಸದನಕ್ಕೆ ಬಂದರೆ । ಕದನ ತೆಗೆಯುವವ । ಬುಧರು ಯೆಂಬದು ಬಲ್ಲನೆ ॥ ೪ ॥ ಹೆಣ್ಣಿನ ಮ್ಯಾಲಿನ ವ್ಯಾಮೋಹ ಬಿಡದವ । ಸನ್ಯಾಸಿಯಾಗುವನೆ ॥ ಅನ್ಯ ದೈವಂಗಳ ಭಜಿಸುವ ನರಗೆ ಮೋ । ಹನ್ನವಿಠಲ ವಲಿವನೇ ॥ ೫ ॥ ಶ್ರೀಃ ।

೨೪. ರಾಗ ನವರೋಜು, ಏಕತಾಳ.

ಬಾರೆ ಭಾಗ್ಯದ ನಿಧಿಯೆ । ಕರ । ವೀರ ನಿವಾಸಿನಿ ಶಿರಿಯೆ ॥ ಪಲ್ಲ ॥ ಬಾರೆ ಬಾರೆ ಕರವೀರ ನಿವಾಸಿನಿ । ಭಾರಿ ಭಾರಿಗೆ ಶುಭ । ತೋರೆ ನಮ್ಮನಿಗೆ ॥ ಅನುಪಲ್ಲ ॥ ನಿಗಮವೇದ್ಯಳೆ ನೀನು ನಿನ್ನ । ಪೊಗಳಲಾರೆನೆ ನಾನು ॥ ಮಗನಪರಾಧವ ತೆಗದೆಣಿಸದೆ ಪ । ನ್ನಗವೇಣಿಯೆ ಲಗುಬಗೆ ಇಂವಲಿ ನಿ ॥ ೧ ॥ ಲೋಕಾ ಮಾತೆಯೆ ನೀನು । ನಿನ್ನ । ತೋಕನಲ್ಲವೆ ನಾನು ॥ ಆಕಳ ಕರುವಿನ ಸ್ವೀಕರಿಸಿದ ಪರಿ । ನೀ ಕರುಣದಿ ಕಾಲ್ಹಾಕೆ ನಮ್ಮನಿಗೆ ॥ ೨ ॥ ಕಡೆಗೆ ನಮ್ಮನಿ ವಾಸಾನಿ । ನ್ನೊಡೆಯನಂತಾದ್ರೀಶ ॥ ವಡೆಯನಿದ್ದಲ್ಲಿಗೆ ಮಡದಿ ಬಾಹುವದು । ನಡತೆ ವುಚಿತವಿದು । ನಡಿ ನಮ್ಮನೆಗೆ ॥ ೩ ॥ ಶ್ರೀಃ ॥

## ೨೫. ರಾಗ ಸಾದನಾಮಕ್ರಿಯೆ. ಆದಿತಾಳ.

ನಮೋ ನಮೋ ರಾಮಾ ದೇವೋ। ತ್ತುಮಾಂಜನೇಯ ಪ್ರೇಮಾ॥ ಪಲ್ಲ॥ ಕ್ಷಮಾಪತ್ರಿತಜನ ಸಮೂಹ ಕಲ್ಪ। ಪ್ರಮಾಪರಾಧ। ಕ್ಷಮಾಪಣಂಕುರು॥ ಅನುಪಲ್ಲ॥ ಅಜಾತ ನರ ರೂಪಾ। ರಘುಜಾಂಬುಜಾಪ್ತಕುಲದೀಪ॥ ಅಜೇಶ ಭುಜಗಾ। ದ್ವಿಜೇಂದ್ರ ಮುಖಸುರ. ವ್ರಜಾಧಿಪತಿ ಹರಿ ಗಜೇಂದ್ರ ವರದ॥೧॥ ಅಯೋಧ್ಯ ಪುರನಿಲಯ। ನಿತ್ಯಾ। ವಿಯೋಗಿಗತಿ ಪ್ರಿಯಾ॥ ದಯಾಪ ಅಸ್ತ್ರ। ಧ್ವಯಾಪಹರ ಋಷಿ। ಸುಯಾಗ ರಕ್ಷಕ। ತ್ರಯಿಾಮಯಾತ್ಮ॥೨॥ ಸನಾತನ ಸುಮಿತ್ರಾ। ಪತಿಸ್ಯಂ। ದನಾಢ್ಯ ನೃಪಪುತ್ರ॥ ಅನಂತ ಮಂಗಳ। ಸುನಾಮ ಪ್ರಣತಾ। ಘನಾಂಗ ಅಭಿನವ। ಜನಾರ್ದನ ವಿಠಲ॥೩॥ ಶ್ರೀಃ।

॥ ಶ್ರೀಕೃಷ್ಣಾರ್ಪಣಮಸ್ತು ॥

## ೨೬. ರಾಗ . ತಾಳ.

ಪಾರ್ವತಿ ಪಾಲಿಸೆನ್ನ। ಮೋಹಿಸಿ ರನ್ನೆ॥ ಪಲ್ಲ॥ ಪಾರ್ವತಿ ಭಕತರ ಸಾರಥಿ ವಂದಿಪೆ। ಸುರಪತಿ ಷಣ್ಮುಖ ಗಣಪರ ಮಾತೆ॥ ಅನುಪಲ್ಲ॥ ಮಂಗಳೆ ಮೃಡಸಂತ। ರಂಗಳೆ ಹರಿಪಾದ। ಭೃಂಗಳೆ ಪಿಂಗಳೆ ಪನ್ನಂಗವೇಣಿ॥೧॥ ಮನದಭಿಮಾನಿಯೆ। ನೆನಿವೆನು ನಿನ್ನನು॥ ಅನುಕರಿಸೆನ್ನನು। ಅಂಬುಜಪಾಣಿ॥೨॥ ಶ್ರೀನಿಧಿ ವೇಣು। ಗೋಪಾಲವಿಠಲನ॥ ಕಾಣಿಸಿ ಕೊಡುವಂಥ। ಶೂಲಿಯ ರಾಣಿ॥೩॥ ಶ್ರೀಃ॥

## ೨೭. ರಾಗ ಯದುಕುಲಕಾಂಬೋಧಿ. ಆದಿತಾಳ.

ನಂಬಿ ಕೆಟ್ಟವರಿಲ್ಲವೋ ... ನೆನೆದ್ಯಕ್ಕದಿರು. ನರಲೋಕಾನಂದವೆಂಬೊ। ಅಂಬಲಿ ಪರಮಾನ್ನ। ಹಂಬಲಿಸುವದು ಹರಿಲೋಕಾ। ನಂದವೆಂಬೊ ಪೀಯೂಷದ ಪಾನ॥ ಪಲ್ಲ॥ ದುರುಳ ಜನರ ಸಂಗವೆಂಬೋದೆಯಂದಿಗು ನೊಣ ಬೆರಸಿದ ವೂಟಾ। ಪರಮ ಭಾಗವತರ ಪದಸಂಗವೆಂಬೋದೆ ಮಸ್ತಕದ ಮುಕುಟ॥ ಮರೆಹೋಗಗೊಳಿಸುವ ಸತಿಸುತರೆಂಬೋರೆ ಕೇವಲ ಯಮ

ಕಾಟ । ಪರ ತತ್ವನಾದ ಶ್ರೀಹರಿಯನ್ನ ಬಯಸುವದೆ ವೈಕುಂಠಕೆ ಪೋಟ ॥ ೧ ॥ ಬಿದ್ದ ಕಾಳಿಗೆ ಕಾಳು ಕೂಡಿ ಹಾಕುವದೆ ಹಾರಿ ಹೋಗುವ ಹೊಟ್ಟು । ಇದ್ದಾಗ ದಾನಧರ್ಮಂಗಳ ಮಾಡುವದೆ ಕೈವಲ್ಯಕೆ ಮೆಟ್ಟು ॥ ಪೊದ್ದಿಕೊಂಡಿರು ಕಂಡಾಶಯು ಬಟ್ಟರೆ ನೀ ಹೋಗುವಿ ಕೆಟ್ಟು ॥ ಬುದ್ಧಿವಂತನಾಗಿ ಪೇಳದಿರೆಲೊ ತತ್ವಸಾರ ಸುಂದರ ಗುಟ್ಟು ॥ ೨ ॥ ಹರಿಗರ್ಪಿಸದ ಕರ್ಮ ಆವದಾದರೇನು ಸೂಳೆಗಿಕ್ಕಿದವಿತ್ತ । ಹರಿಗೆ ವಿಶ್ವಾಸದಿ ಅಣುಮಾತುರರ್ಪಿಸೆ ಅವನೆ ನಿರ್ಮಲಚಿತ್ತ । ನಿರುತ ಗ್ರಾಸಕೆ ಚಿಂತೆ ಮಾಡಲು ವದಗುವ ಪುಣ್ಯವು ಅವಗೆತ್ತ । ಅರಿವೊರೆಯಿಲ್ಲದೆ ಧೃಢವುನದಿಪ್ಪದೆ ಸಂಪಾದನೆ ಭತ್ತಾ ॥ ೩ ॥ ಕಲ್ಪಾವಕಾಶವೆ ಈ ಶರೀರವು ಘಾಳಿಗಿಕ್ಕಿದ ದೀಪ । ಅಲ್ಪ ಸಂತೋಷಿಯಾಗುವದು ನಿನಗೆ ನೋಡು ಹಾಲು ಸಕ್ಕರೆ ತುಪ್ಪ । ಬಲ್ಪಂಥ ಮಾಡದಿರು ಜನುಮ ಜನುಮಗಳಲಿ ಬಿಡದೀ ಸಂತಾಪ । ಸ್ವಲ್ಪ ಕಾಲಾದರು ಮಧ್ವಮತವೆ ಪೊಂದುಭವವೆ ನಿರ್ಲೇಪ ॥ ॥ ೪ ॥ ಭಾವವಿರಕುತಿಯು ಧರಿಸದಿದ್ದರೆ ಆಗುವದು ಖೇದ । ಸಾವಿರ ಕೊಂದೆ ಮಾತು ಹರಿದಾಸ ನೆನಿಸೋದೆ ಪರಿಪರಿಯ ಸ್ವಾದ । ದೇವಕಿ ಸುತ ನಮ್ಮ ವಿಜಯವಿಠಲನ ತೀರಥಪ್ರಸಾದ । ಸೇವಿಸದಾ ನರನಿತ್ಯ ನರಕವಾಸಿಯೆನುತಲಿವೆ ವೇದ ॥ ೫ ॥ ಶ್ರೀಃ ॥

೨೮. ರಾಗ ಬೇಹಾಗ್. ತಾಳ.

ನೆರೆ ನಂಬಿದೆ ಮದ ಹೃದಯ ಮಂಟಪದೊಳು । ಪರಿಶೋಭಿಸುತಿರು ಪಾಂಡುರಂಗ । ಶರಣು ಜನರ ಸಂಸಾರ ಮಹಾ ಭಯ । ಹರಣ ಕರುಣ ಶಿರಿ ಪಾಂಡುರಂಗ ॥ ಪಲ್ಲ ॥ ಪರದೇವನೆ ನಿನ್ನ ಲೀಲಾಸ್ಮೃತಿಯನು । ನಿರುತ ಯೆನಗೆ ಕೊಡು ಪಾಂಡುರಂಗ । ಪರರಾಪೇಕ್ಷೆಯ ಬಿಡಿಸಿ ನಿರಂತರ । ಪರಗತಿ ಪಥತೋರೊ ಪಾಂಡುರಂಗ ॥ ೧ ॥ ನೆರದಿಹ ಬಹು ಜನರೊಳಿದ್ದರು ಯೆನ್ನ ಮನ । ಸ್ಥಿರವಿಡು ನಿನ್ನಲಿ ಪಾಂಡುರಂಗ ॥ ಪರಿಪರಿ ಕೆಲಸವು ನಿನ್ನ ಮಹಾ ಪೂಜೆ । ನಿರುತ ಯೆನಗೆ ಕೊಡು ಪಾಂಡುರಂಗ ॥ ॥ ೨ ॥ ಸುಖವಾಗಲಿ ಬಹು ದುಃಖವಾಗಲಿ । ಸಖ ನೀನಾಗಿರು ಪಾಂಡು

ರಂಗ। ನಿಖಿಳಾಂತರ್ಗತ ವ್ಯಾಸವಿಠಲ ತ್ವ। ನ್ಮುಖ ಪಂಕಜ ತೋರೊ ಪಾಂಡುರಂಗ ॥ ೩ ॥ ಶ್ರೀಃ ॥

## ೨೯. ರಾಗ ಮಧ್ಯಮಾವತಿ, ಆದಿತಾಳ.

ಜಯತೀರ್ಥ ಗುರುರಾಯ ಕವಿಗೇಯಾ । ಪಾದ । ದ್ವಯಕಭಿನಮಿಸುವೆ ಶುಭಕಾಯ ॥ ಪಲ್ಲ ॥ ಭಯಹರ ಕರುಣಾ ನಯನದಿ ದಿನದಿನ । ವಯನವೆ ಪಾಲಿಸು । ಬಯಸುವೆ ಇದನೆ ॥ ಅನುಪಲ್ಲ ॥ ಎಂದೆಂದು ನಿನ್ನ ಪಾದ । ಪೊಂದಿದವರ ಪಾದ । ದ್ವಂದಾರಾಧಕರ ಸಂಬಂಧಿಗರ । ನೆಂದು ಪಾಲಿಸೊ ಕಾರುಣ್ಯ ಸಾಗರ ॥ ಮಂದನು ನಾ ಕ । ರ್ಮಂದಿಗಳ ರಸ ಮು । ಕುಂದನ ತೋರ್ಮನ । ಮಂದಿರದೊಳು ॥ ೧ ॥ ಹರಿಪಾದಾಂಬುಜ ಸಕ್ತ । ನಿಜ ಭಕ್ತಾಜನರ । ಪರಿಪಾಲಿಪ ಸಮರ್ಥಕ್ಷೋಭ್ಯತೀರ್ಥ । ಕರಕಮಲ ಸಂಜಾತ ಆನಂದದಾತ ॥ ಪರಮಹಂಸ ಕುಲ । ವರನೆ ವಂದಿಸುವೆ । ಕರುಣದಿಂದ ಯನ । ಗರುಪುಸುತತ್ವ ॥ ೨ ॥ ಕಾಮಿತ ಫಲದಾತ ಜಗನ್ನಾಥವಿಠಲ । ಸ್ವಾಮಿ ಪರಮದೂತ ಪರಮಪ್ರಖ್ಯಾತ । ಶ್ರೀಮಧ್ವಮತಾಂಬುರುಹ ಪ್ರದ್ಯೋತ ॥ ತಾಮಸಮತಿಕಳದೀ ಮಹಿಸುರರ ಮಾ । ಹಾಮಹಿತರ ಮಾ। ದ್ದೆ ಮುನಿವರ್ಯ ॥ ೩ ॥

## ೩೦. ರಾಗ ಮಧ್ಯಮಾವತಿ, ಅಟತಾಳ.

(ಭಾರತೀಶನೆಯೆನ್ನ ಎಂಬಂತೆ)

ಕರುಣದಲಿ ಪಿಡಿ ಕಯ್ಯಾ । ಶಿರಿ ಮನುಜಕೇಸರಿ । ಧರಣಿ ಸುಮನಗೇಯ । ಮೊರೆ ಹೊಕ್ಕೆ ನಿನ್ನನು । ತರಣಿ ಸನ್ನಿಭ ಕಾಯ । ಕ್ಷೀರಾಬ್ಧಿಶಯ್ಯಾ ॥ ಸರಸಿಜಾಸನಜನಕ ತವ ಪದ । ಮರೆದು ಪಾಮರನಾಗಿ ನಾ ಭವ । ಶರಧಿಯೊಳು ಬಿದ್ದು । ಹರಿದು ಪೋಗುವೆ । ಉರಗರಿಪುಧ್ವಜನಾಗಿ ನೀ ಬಂದು ॥ ಪಲ್ಲ ॥ ಅಜಿತ ದೇವಕಿ ಸೂನು । ಸರ್ವೇಶ ರಾಘವ । ಭಜಕ ಜನಸುರಧೇನು । ಸ್ಮರತ ಕೇಶವ । ಸುಜನ ವಾರಿಜ ಭಾನು । ಖಳವನಕೃಶಾನು ॥ ತ್ರಿಜಗಪೋಷ ಪರಮ ಸುಲಭ ನೀ । ನಿಜ ದಯದಿ ಹರಿಮದವ ಖಂಡಿಸಿ । ವ್ರಜದ ತುರುಗಳ ಕಾಯ್ದ ಅಜನುತ ।

ದ್ವಿಜಪ ಸುತೆಪಿತ । ಧ್ವಜದರೂಪನೆ ॥ ೧ ॥ ಪತಿತ ಪಾವನ ರಂಗ । ಸತತ ನಿನ್ನನು । ಸ್ತುತಿಪ ಸುಜನರ ಸಂಗಾ । ಕೊಟ್ಟು ಪಾಲಿಸು । ದಿಶಿ ಜತತಿ ಮಾತಂಗ । ಮರಿಗೆ ಶಿಂಗಾ ॥ ಶಿತತು ರಂಗನ । ರಥದಿ ಶೋಭಿಪ । ಅತುಳ ಮಹಿಮನ ಜನನಿ ಅನುಜಗೆ । ಹಿತದಿ ಭ್ರಾತನ ಭೀತಿ ಬಿಡಿಸಿದ । ಶ್ರುತಿಗೆ ಸಿಲುಕದ । ಚ್ಯುತವಿದೂರನೆ ॥ ೨ ॥ ಸಾಮಗಾನ ವಿಲೋಲ । ಸುರರಾಜ ಪೂಜಿತ । ಹೇಮಕಶ್ಯಪ ಕಾಲ । ಕರಿದನುಜ ಹರನುತ । ಸ್ವಾಮಿ ಶ್ರೀವನಮಾಲ । ಧರ ಸುಗುಣ ಶೀಲಾ ॥ ಕಾಮಪಿತಹಿಮ । ಧಾಮವದನ ಸು । ಧಾಮ ಸಖಸುರ । ಸ್ತೋಮವಂದಿತ । ಯಾಮಿ ನಿಚರ ವೈರಿ ವಾಮನ । ಶ್ರೀಮನೋಹರ । ಶ್ಯಾಮಸುಂದರ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೩೧. ರಾಗ ಆನಂದಭೈರವಿ, ಝಾಪುತಾಳ.

ಶರಧಿ ಸಂಭೂತೆ ಕಾಯೆ । ಶಿರಬಾಗಿ ಬೇಡುವೆ ತಾಯೆ । ಸುರಮುನಿ ಜನ ಸೇವಿತೆ । ಕರಪಿಡಿ ಸುಖದಾತೆ ॥ ಪಲ್ಲ ॥ ಸೀತೆ ಶ್ರೀಜಾನಕಿಯೆ । ಸೀತಾಂಶು ಬಿಂಬಾನನಿಯೆ । ಮಾತೆ ನೀ ಬಂದು ಪಾಲಿಸೆ । ಯೆನ್ನವ ಗುಣ ಬಿಡಿಸೆ ॥ ೧ ॥ ಮಂದಜಾಸನನ ಜನನಿ । ಕುಂದ ಕುಡ್ಮಲರದನಿ । ವಂದಿಪೆ ವನಜಾ ಮಂದಿರೆ ಗೋ । ವಿಂದನ ತ್ತೋರೆ ॥ ೨ ॥ ಶ್ಯಾಮಾ ಸುಂದರನ ರಾಣಿ । ಭೂಮಿ ಸಭ ಸಂಚಾರಿಣಿ । ಭಾಮೆ ನಂಬಿದೆ ಅಂಭ್ರಣಿ । ಘನ ಮಂಜುಳ ವಾಣಿ ॥ ೩ ॥ ಶ್ರೀಃ ॥

## ೩೨. ರಾಗ ಪೂರ್ವಿ, ಅಟತಾಳ.

(ವಿತಲಯ್ಯ ಎಂಬಂತೆ.)

ಪ್ರಥಮಾಂಗ । ಪ್ರಥಮಾಂಗ ॥ ಪೃಥುವಿಸುರಾರ್ಚಿತ । ಅತುಳ ಮಹಿಮ ಗುರು ॥ ಪಲ್ಲ ॥ ದಶವರೂಥ ಜನ । ಕುಶಲವ ತ್ವರಿತದಿ । ವಸುಧಿಜೆ ಗರುಪಿದ । ಅಸಮ ಚರಿತ ಗುರು ॥ ೧ ॥ ಕುಂಜ ರಘುಪತಿ । ಭಂಜನ ಭಾವಿ । ಕಂಜಜ ಕಾಯೊ ಮೃ । ತ್ಯುಂಜಯ ವಂದಿತ ॥ ೨ ॥ ಅಥವಾ

ದ್ವೈತರ । ಮದವಳಿಯಲು ನಡು ಸದನನ ಸುವತಿಯ । ಉದರ ದೊಳುದಿಸಿದ ॥ ೩ ॥ ಬಕಕೀಚಕ ಖಳ । ನಿಕರ ತರಿದ ಪಾ । ವಕ ಸಖ ವೃಕೋದರ । ಸುಖ ತೀರಥ ಗುರು ॥ ೪ ॥ ಹೇಮೋದರ ಪಿತ । ಶ್ಯಾಮ ಸುಂದರನ । ಪ್ರೇಮದ ಸುತನು । ತ್ರಾಮನ ಪಿತ ಗುರು ॥ ೫ ॥

## ೩೩. ರಾಗ ಆನಂದಭೈರವಿ, ಅಟತಾಳ.

ಎಂತು ನೀ ವಶವಾದಿಯೆ । ಭಾರತಿ ದೇವಿ ॥ ಎಂತು ನೀ ಮರುಳಾದಿಯೆ ॥ ಪಲ್ಲ ॥ ಎಂತು ನೀ ವಶವಾದಿ । ಕಂತುಹರನ ತಾಯಿ । ದಂತಿಗಮನೆ ದಮ । ಯಂತಿ ಕಾಂತನ ಸುತೆ ॥ ಅನುಪಲ್ಲ ॥ ಧರೆಯೊಳು ಪುಟ್ಟುತಲಿ । ಆಕಾಶಕ್ಕೆ । ಭರದಿಂದ ಜಿಗಿಯುತಲಿ ॥ ಸರಸಿಜ ಸಖನಾದ । ತರಣಿಯ ಫಲವೆಂದು । ಅರಿತು ಭಕ್ಷಿಸಲ್ಹೋದ । ತರುಚರ ರೂಪಿಗೆ ॥ ॥ ೧ ॥ ಪುಂಡರೀಕಾಕ್ಷಿ ಕೇಳೆ । ದ್ವಾಪರದಿ ಪ್ರ । ಚಂಡಿಗೆ ವಲಿಯುತಲಿ ॥ ಬಂಡಬಕನ ಶಿರವ । ದಿಂಡು ಗೆಡಹಿ ಅವನ । ಭಂಡಿ ಓದನವನ್ನು । ಉಂಡಪುಂಡಗೆ ಮಾತೆ ॥ ೨ ॥ ಶ್ರೀಶ್ಯಾಮ ಸುಂದರನು । ತ್ರೈಲೋಕಕ್ಕೆ । ಈಶನೆಂಬುದು ತಾನು ॥ ಲೇಸಾಗಿ ಪೇಳಲು ಲೇಶವಾದರು ನಿನ್ನ । ಆಶೆಯಿಲ್ಲದಾತ ಸ । ನ್ಯಾಸಿಯಾದ ನೋಡೆ ॥ ೩ ॥ ಶ್ರೀಃ ॥

## ೩೪. ರಾಗ ಶಂಕರಾಭರಣ. ಅಟತಾಳ.

ಹನುಮಂತ । ಪಾಹಿ । ಹನುಮಂತ ॥ ಮುನಿ ವ್ಯಾಸಕರಕಮಲಾರ್ಚಿತ ಜಯವಂತ ॥ ಪಲ್ಲ ॥ ಭೂಲೋಲ ಕೋಲಜ । ಕೂಲ ಸುಮಂದಿರ । ಫಾಲಾಕ್ಷ ಪೌಲೋಮಿ ಪತಿ ವಂದಿತ । ಕಾಲಕಾಲದಿ ನಿನ್ನ । ವಾಲೈಸು ವರ ಸಂಗ । ಪಾಲಿಸು ಕರುಣದಿ । ಕಾಳೀ ಮನೋಹರ ॥ ೧ ॥ ಬಾಣ ರೂಪನೆ ಪಂಚ । ಬಾಣ ನಿರ್ಜಿತ ಷ । ಟ್ಷ್ರೋಣ ಮಧ್ಯದಿ ಬಂದು । ನೀನೆಲಸಿ ॥ ಕ್ಷೋಣಿಗೀರ್ವಾಣ । ಶ್ರೇಣಿಯಿಂದರ್ಚನೆ । ಮಾಣದೆ ಕೈಕೊಂಬ । ವಾಣೀಶ ಸ್ಥಾನಾರ್ಹ ॥ ೨ ॥ ಸಿಂಧು ಬಂಧನ ಶ್ಯಾಮ ಸುಂದರವಿಠಲನ । ದ್ವಂದ್ವಪಾದಾರ । ವಿಂದಕ್ಕೆ ಮಧುಪಾ । ನೆಂದೆನಿ

ಸಿದ ಗುರು । ಗಂಧವಾಹನೆ ನಿನ । ಗೊಂದಿಸುವೆನು ಭವ । ಬಂಧ ಬಿಡಿಸಿ ಕಾಯೊ ॥ ೩ ॥ ಶ್ರೀಃ ॥

ತ೫. ರಾಗ ಕಾಂಬೋಧಿ, ಝಂಪೆತಾಳ.

ಪಾಲಿಸೆನ್ನನು ಪಂಪಕ್ಷೇತ್ರವಾಸ ॥ ಫಾಲಲೋಚನ ಶಂಭೊ ಪಾರ್ವತೀಶಾ ॥ ಪಲ್ಲ ॥ ನೀಲಲೋಹಿತ ವೀತ । ಚೈಲ ಭೂಷಿತ ಭಸಿತ ॥ ಕಾಲಾರಿ ಶಿವದ್ರೋಣಿ । ಶೂಲಪಾಣಿ ॥ ವ್ಯಾಳಮಾಲನೆ ನೀನು । ಕಾಳ ಕೂಟವ ಮೆದ್ದು । ತಾಳಲಾರದೆ ಕೊಂಡ । ಮೇಲೌಷಧವನಿತ್ತು ॥ ೧ ॥ ವ್ಯಾಧ ರೂಪದಿ ರಣದಿ । ಕಾದು ಪಾರ್ಥಗೆ ಸೋತು । ನೀ ದಯದಿ ದಿವ್ಯಾಸ್ತ್ರ ಕರುಣಿಸಿದಿಯೊ । ಮೇದಿನೀಶನೆ ಶಾಸ್ತ್ರ । ಬೋಧಿಸಿದ ಮುನಿವರ್ಯ । ವೇಧನಂದನ ನಿನ್ನ । ಪಾದ ನಂಬಿದೆನಿಂದು । ೨ ॥ ಕಾಮಾರಿ ಸುಪವಿತ್ರ । ಸೋಮಾರ್ಕ ಶಿಖಿನೇತ್ರ । ಶ್ಯಾಮ ಸುಂದರವಿಠಲ । ಸ್ವಾಮಿಮಿತ್ರ ॥ ಭೀಮ ಪಾವನ ಗಾತ್ರ । ಪ್ರೇಮಾಬ್ಧಿ ಸುಚರಿತ್ರ । ಹೈಮವತಿ ಕಳತ್ರ ಮಹಿಮಚಿತ್ರ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ತ೬. ರಾಗ ಕಾಂಬೋಧಿ, ಝಂಪೆತಾಳ.

ಸತತ ಪಾಲಿಸು ಯೆನ್ನ ಯತಿ ರಾಘವೇಂದ್ರ । ಪತಿತ ಪಾವನ ಪವನ ಸುತ ಮತಾಂಬುಧಿ ಚಂದ್ರ ॥ ಪಲ್ಲ ॥ ನಂಬಿದೆನು ನಿನ್ನ ಚರ । ಣಾಂಬುಜವ ಮನ್ಮನದ । ಹಂಬಲವನಿತ್ತು ಪೊರಿ । ಬೆಂಬಿಡದಲೆ । ಕುಂಭಿಣಿ ಸುರನಿಕು । ರಂಬವಂದಿತ ಜಿತ । ಶಂಬರಾಂತಕ ಶಾತ । ಕುಂಭ ಕಶ್ಯಪ ತನಯ ॥ ೧ ॥ ಕ್ಷೋಣಿಯೊಳು ನೀ ಕುಂಭ । ಘೋಣ ಕ್ಷೇತ್ರದಿ ಜನಿಸಿ । ವೇಣಿ ವೆಂಕಟರೆಂಬ ನಾಮದಿಂದ । ಸಾನುರಾಗದಿ ದ್ವಿಜನ । ಪ್ರಾಣ ವುಳಹಿದ ಮಹಿಮೆ । ಏನೆಂದು ಬಣ್ಣಿಸಲಿ । ಜ್ಞಾನಿಕುಲ ತಿಲಕ ॥ ೨ ॥ ಮಂದಮತಿಗಳ ಸಂಗದಿಂದ । ನಿನ್ನಯ ಚರಣ । ಇಂದಿನ ವರೆಗು ನಾ । ಪೊಂದಲಿಲ್ಲ । ಕುಂದು ನೋಡದೆ ಸಲಹೊ । ಕಂದರ್ಪ ಪಿತ ಶ್ಯಾಮ । ಸುಂದರನದಾಸ ಕ । ರ್ಮಂದಿವರ ದಯದಿ ॥ ೩ ॥ ಶ್ರೀಃ ॥

## ೩೭. ರಾಗ ಮೋಹನ, ಆದಿತಾಳ.

(ರಥವಾನೇರಿದಾ ರಾಘವೇಂದ್ರಾ, ಎಂಬಂತೆ.)

ರಂಗ ವಲಿದ ದಾಸರಾಯ ॥ ಸತ್ಯವಿಜನಗೇಯ ॥ ಮಂಗಳಕರ ಕುಲಿ । ಶಾಂಗ ಮತಾಂಬುಧಿ । ತಿಂಗಳ ಮಾನವ । ಶಿಂಗಾರ್ಯರಸುತ ॥ ಪಲ್ಲ ॥ ಶರಣಾ ಮಂದಾರ ಪರಮೋದಾರ । ಪರಿಪಾಹಿ ಸುಧೀರ । ಸರಸಿಜ ತುಳ ಸಿಮಣಿ ಸುಹಾರ । ಶೋಭಿತ ಕಂಧರ ॥ ಶಿರಿವರ ಹರಿ ಚರಿತಾಮೃತ । ಸಾರಸುಸರಸ ಗ್ರಂಥಕೃತ । ಕರುಣಾನಿಧಿ ಗುರು ॥ ೧ ॥ ಜ್ಞಾನಿಕುಲ ನಾಥಾ । ಭಾನುಜ ಸೂತಾ । ಭವವಾರಿಧಿ ಪೋತಾ । ಕ್ಷೋಣಿಸುರ ವ್ರಾತ ನಮಿತ ಸುಖ್ಯಾತಾ । ವರದಾನಿ ಪುನೀತಾ ॥ ಧೇನುಪಾಲ ದಾಸಾ ರ್ಯರ ಪದಯುಗ । ಧ್ಯಾನಿತ ಮಾನಿತ ಮಾನವಿ ನಿಲಯ ॥ ೨ ॥ ಕಾಮಿತ ದಾತಾ ದುರಿತ ವಿದೂರ । ಸನ್ಮಹಿಮ ಪಾರ । ಪಾಮರ ಹೇಮ ಶಯ್ಯ ಕುಮಾರಾ । ಕುಮತಾಬ್ಧ ಸಮೀರಾ ॥ ಕೋಮಲಾಂಗ ಮಮ । ಸ್ವಾಮಿ ಸೋಮನುತ । ಶಾಮ ಸುಂದರ ಸು । ಧಾಮ ಪ್ರೇಮ ಸಖ ॥ ೩ ॥

## ೩೮. ರಾಗ ವರಾಳಿ, ಅಟತಾಳ.

ಅಂಜಿಕ್ಯಾತಕೆ ಮನವೇ । ಅಂಜಿಕ್ಯಾತಕೇ । ಕುಂಜಹರನ ಪಿತನ ಪಾದ । ಕಂಜನಿರತ ಭಜಿಸುತಿರಲು । ಅಂಜಿಕ್ಯಾತಕೇ ಮನವೇ ॥ ಪಲ್ಲ ॥ ಎರಡು ಒಂದು ಕೋಟಿ ರೂಪ । ಧರಿಸಿ ರಕ್ಕಸರೊಳು ಕಾದಿ ॥ ಹರಿಯ ಕರುಣ ಫಳಿಸಿದವನ । ಚರಿತೆಗಳನು ಸ್ಮರಿಸುತಿರಲು ॥ ೧ ॥ ತಾಸಿಗೆಂಟು ಒಂದು ನೂರು । ಶ್ವಾಸ ಜಪವ ಮಾಡಿ ಜಂತು ॥ ರಾಶಿಗಳಿಗೆ ಸತತ ಬೇಡಿ । ದಾಸೆ ಪೂರ್ತಿಸೂವವನಿರಲು ॥ ೨ ॥ ಜಂಗಮರಿಗೆ ಪಾಣಿ ಚರಣ । ಕಂ ಗಳು ಕಿವಿ ಆಡಿಸುತಲಿ ॥ ಪಿಂಗಳನಿಭ ಭಾರತೀಶ । ಹಿಂಗದನವರತ ಪೊರೆಯಲು ॥ ೩ ॥ ಪರಿಹರಿಸುತಲಗ್ನಿ ಭಯವ । ತ್ವರ ಹಿಡಂಬ ಕೀಚಕ ಪ್ರಮು ॥ ಖರನು ಕುರುಪತಿಯ ಕುಲವನು । ತರಿದ ಕುಂತಿ ಕುವರನಿರ ಲು ॥ ೪ ॥ ಭುಜಕೆ ಗೋಪಿಚಂದನವನು । ವಿಜಯ ಚಕ್ರಗಳನು ಧರಿಸಿ ॥ ಕುಜನರಿಪು ಪ್ರಾಣೇಶವಿಠಲ । ಭಜಕನ ದಯಪೂರ್ಣವಿರಲು ॥ ೫ ॥

### ೩೯. ರಾಗ ಸಾರಂಗ, ಅಟತಾಳ.

ನಮಿಸೊ ಗಂಧವಹಗೆ ಪ್ರತಿದಿನಾ । ನಿನ್ನ ಶ್ರಮವ ಕಳದು ಅಭೀಷ್ಟಿಯ ಕೊಡುವ ಮನುಜ । ನಮಿಸೊ ಗಂಧವಹಗೆ ಪ್ರತಿದಿನಾ ॥ ಪಲ್ಲ ॥ ಹರಿ ಕರುಣಿಸದಿರೆ । ಗುರು ಕರುಣಿಸುವನು । ಗುರು ಕರುಣಿಸದಿರೆ ಹರಿ ಜರೆವ ॥ ಧರೆಯೊಳು ವಾತಪ್ರಸಾದ ಸಂಪಾದಿಸಿ । ಶಿರಿವಲ್ಲಭಗೆ ಬೇಕಾದವರ ಕೇಳೊ ಮನುಜ ॥ ೧ ॥ ಹನುಮ ವಲಿದನೆಂದು ವಲಿದ ಸುಗ್ರೀವಗೆ । ಮನಸಿಜ ಪಿತನು ತನ್ನಯ ಚರಣಾ ॥ ಘನವಾಹಸುತ ಭಜಿಸಿದರನ್ನ ವಗೆ ಪ್ರಭಂ । ಜನ ವಲಿದದಕೆ ಕೊಂದನು ಕೇಳಿಲೊ ಮನುಜ ॥ ೨ ॥ ದುರ್ಜನಾಂತಕಗೆ ಬೇಕಾದ ಕಾರಣದಿಂದ । ಅರ್ಜುನಾದಿಗಳು ಸುಖವ ಬಟ್ಟಿರೂ ॥ ಅಬ್ಜಾಪ್ತ ಸುತ ಅಸಮರ್ಥನೇ ರಣದೊಳು । ನಿರ್ಜಿತನಾ ಗಲು ತಿಳಕೊ ಇದು ಮನುಜ ॥ ೩ ॥ ಸುರರೆಲ್ಲ ಕೂಡಿ ನ್ಯಾಯವ ಮಾಡಿ ನೋಡಲು । ಸರಿಯಾಗಲಿಲ್ಲವು ಮಾರುತಗೆ ॥ ಗರಳ ಉದ್ಭವಿಸಲು ಮಥನಕಾಲದಿ ಆದಿ । ತ್ಯರ ಮೊರೆ ಕೇಳಿ ಪ್ರಾಶನ ಮಾಡಿದ ಮನುಜ ॥ ॥ ೪ ॥ ಶಮೆಯಲ್ಲಿ ದಮೆಯಲ್ಲಿ ಸರ್ವ ಗುಣದಲಿ ಪ । ವಮಾನಗೆ ಸರಿ ಯುಂಟಾವನು ಜಗದೀ ॥ ಅಮಲ ಪ್ರಾಣೇಶವಿಠ್ಠಲನಿಗಲ್ಲದವನು । ಯಮಸದನಕೆ ಯೋಗ್ಯ ಸಮಗಲ್ಲೆಂಬ ಮನುಜ ॥ ೫ ॥ ಶ್ರೀಃ ॥

### ೪೦. ರಾಗ ಕಾಂಬೋಧಿ. ಝಂಪೆತಾಳ.

ಶ್ರೀವಾಯು ದೇವರಿಗೆ ನೀತವಾದ । ಮೂವತ್ತೆರಡು ಸುಲಕ್ಷಣಗಳನು ವರ್ಣಿಸುವೆ ॥ ಪಲ್ಲ ॥ ತೋಳು ಜಾನುಗಳು ಸ್ತನತುದಿಯು ನಾಸಿಕಚಕ್ಷು । ನಾಲಕೊಂದು ದೀರ್ಘ ಜಂಘೆಗ್ರೀವಾ ॥ ಆಲಿಂಗ ಪೃಷ್ಠ ನಾಲ್ಕು ಹ್ರಸ್ವ ಕೇಸರದ । ಮೇಲಾದತ್ವಕ್ಕು ಬೆರಳು ನಖ ಪಂಚ ಸೂಕ್ಷ್ಮಾ ॥ ೧ ॥ ಕಕ್ಷ ಕುಕ್ಷಿಯು ವಕ್ಷ ಕರ್ಣ ನಖಸ್ಕಂಧಾರು । ರಕ್ಷಘ್ನನಿಗೆ ಶೋಭಿಸವು ಉನ್ನತಾ ॥ ಅಕ್ಷಿ ಚರಣಕರ ನಖಅಧರ ಜಿಹ್ವೇಽಣು ಜಿಹ್ವೆ । ಮೋಕ್ಷ ವನ ಈ ಯೇಳು ಅವಯವ ರಕ್ತಾ ॥ ೨ ॥ ಸತ್ವನಾಭಿಯು ಸ್ವರವು ಈ ಮೂರು ಗಂಭೀರ । ಉತ್ತಮ ಲಲಾಟ ಊರುದ್ವಯ ವಿಸ್ತರಾ ॥ ಸತ್ಯ

ಸಂಕಲ್ಪ ಶ್ರೀಪ್ರಾಣೇಶವಿಠ್ಠಲನ । ಭೃತ್ಯೋತ್ತಮಗೆ ತಕ್ಕವಿವು ಆರಿಗೂ ಇಲ್ಲಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೪೧. ರಾಗ ದ್ವಿಜಾವಂತಿ. ಏಕತಾಳ.

**ಸ**ಲಹೊ ಜಡಚೇತನಾ । ನಿಲಯ ಶ್ರೀಹನುಮಂತಾ । ಕಲುಷವಿದೂರ ಶಾಂತ । ಕುಲಿಶಬಾಧೆಗೆ ನೀನೇ ಗತಿಯೆಂದು ಮೊರೆ ಹೊಕ್ಕೆ । ಕುಲಜ ಪಾಲಕ ಹರಿ । ಕುಲಜದಯಾಂಬುಧೇ ॥ ಪಲ್ಲ ॥ ಕಂಜಚರಣ ಗದ ಕಂಜಧರನ ಪಾದಾ । ಕಂಜ ಮಧುಪ ಮುನಿಪ । ಕಂಜವದನ ನಭ ಕಂಜಸುರಪ ರವಿ । ಕಂಜವಿನುತ ವಿಜಿತ ॥ ಕಂಜ ಕೇತನ ಕಂಜಪಕ್ಷ ಖಳಸೂದನ । ಕಂಜನಾಶನ ಭಾವಿಕಂಜ ದಯಾಂಬುಧೇ ॥ ೧ ॥ ಕಾಲ ನೇಮಿಹನಿಚ್ಛೆ ಹೀಗೆಂದು ತಿಳಿದು ಆ । ಕಾಲಜನನುಸರಿಸೀ । ಕಾಲ ಕಳೆದು ವಿಪಿನಾಜ್ಞಾತವಾಸದಿ । ಕಾಲಾರಿ ಪಾಲಿಸಿದಿ ॥ ಕಾಲು ಪಿಡಿದವನ ಶಾಪ ಕಳದಿ ಆವಾ । ಕಾಲಕು ನೀನೆ ಗತಿ ಜಗಕೆ ದಯಾಂಬುಧೇ ॥ ೨ ॥ ಪ್ರಾಣಾಪಾನ ವ್ಯಾನೋದಾನ ಸಮಾನ ಹೇ ಜಗ । ತ್ರಾಣ ಸಮೀರ ಜ್ಞಾನ । ಪ್ರಾಣಾಧಿ ಪೂರ್ಣಾದಿ ಪ್ರಾಣಾನಂದನ ತಿರಸ್ಕೃತ ಪಂಚಾಲ ಸುತಾ ॥ ಪ್ರಾಣದೊಡೆಯ ನೀನೊಲಿಯದೆ ಎಂದಿಗೂ । ಪ್ರಾಣೇಶವಿಠ ಲನ ಕಾಣೇ ದಯಾಂಬುಧೇ ॥ ೩ ॥ ಶ್ರೀಃ ॥

೪೨. ರಾಗ ತೋಡಿ, ಏಕತಾಳ.

**ಭಾ**ರತಿರಮಣ ಪವಮಾನ । ಜಗದೊಳು ಸುತ್ರಾಣ । ಘೋರ ದುರಿತಾರಣ್ಯ ದಹನ । ಮಾರಕದನ ಜಿತ ವಾರವಾರಕೆ ಶ್ರೀನಾರಾಯಣನ ಪದ ಆರಾಧನೆ ಕೊಡು ॥ ಪಲ್ಲ ॥ ವ್ಯೈಗಣ್ಣ ಪದ ಪಾಳ್ದವಾತ । ಲೋಕ ವಿಖ್ಯಾತನಾಗ ಜನಕ ಭಜಕಪ್ರೀತ । ಯೋಗೇಶ ಜಡ ಜಂಗಮ ವಿತತ । ಅದ್ಭುತ ಚರಿತ । ಬಾಗುವೇ ಲಾಲಿಸೊ ಮಾತ ॥ ಹೋಗುತಲಿದೆ ಹೊತ್ತೀಗಲೆ ತವಕದಿ । ಭಾಗವತರೊಳಗೆ ಭಾಗೀರಥಿ ಪಿತ । ನಾ ಗುಣ ಪೊಗಳಸೊ । ಜಾಗು ಮಾಡದಲೆ । ನಾಗಾದಿರೂಪನೆ ಗರುಡಾರ್ಚಿತ ॥ ೧ ॥

ಗೀರ್ವಾಣವಂದ್ಯ ಹರಿದಶ್ವ ತೇಜ ವೃಷದಶ್ವ। ದೂರ್ವಾಸಾರ್ಚಿತ ಮಾತ ರಿಶ್ವ। ಪಾರ್ವತಿಪತಿವಂದ್ಯಾ ದುಸ್ಸ್ವ। ಭಾವಗತ ನಭಸ್ವ। ತ್ರ್ಯಾರ್ವ ಕ ದೇವ ಹಂಸಾಶ್ವ। ತೋರ್ವದು ಜ್ಞಾನವ। ಬೀರ್ವದು ಕರುಣವ। ಪೂರ್ವ ದೇವದೂಷಣ। ಸಾರ್ವೆ ನಿನ್ನನು ಯೆನ್ನ। ಚಾರ್ವಕ ಮತಿ ಯನು। ಜೇರ್ವರಿ ಶೆಳೆಯಲು। ಊರ್ವಿಯೊಳಗೆ ಮತ್ತ್ರೋರ್ವರ ಕಾಣೆ॥ ೨॥ ತ್ರಿಗುಣವರ್ಜಿತ ಪ್ರಾಣೇಶ। ವಿಠಲನ್ನ ದಾಸ ನಗಪಾಲ। ಕೊಡು ಯೆನಗೆ ಲೇಸ। ಅಗಣಿತ ಮಹಿಮನೆ ಕಾಷಾಯ ವಸನಭೂಷ। ನಿಗಮವೇದ್ಯನೆ ನಿರ್ದೋಷ॥ ನಗಸ್ತ್ರೀಮಗಳಿಗೆ। ಪಗೆಯಾಗಿಪ್ಪನ। ಮಗನ ಧ್ವಜದಿ ನಿಂದಿಗಡ ಕುರುಜರಿದೆ। ಭುಗಿಲೆಂಬುವ ತೆರ। ಮೃಗ ಧ್ವನಿಮಾಡಿದನಘ ಪೊರೆವದು ಕರಮುಗಿವೆ ಚರಣಕೆ॥ ೩॥ ಶ್ರೀ॥

೪೩. ರಾಗ ನಾಟಿ, ಝಂಪೆತಾಳ.

ಗುರುವೆ ಭಾರತೀನಾಥ। ಶರಣು ಲಾಲಿಸೊ ಮಾತ। ಹರಿಪದಾರ್ಚನೆ ಕೊಟ್ಟು। ಪೊರೆಯೊ ದಯವಿಟ್ಟು॥ ಪಲ್ಲ॥ ರಾಮ ಸೇವಕನಾಗಿ ವಾನರ ಕಟಕ ನೆರಹಿ। ನೀ ಮುದದಿ ಲವಣಾಬ್ಧಿ ದಾಟಿ ಪೋಗೀ॥ ಭೂಮಿ ತನುಜಳಿಗೆ ವಾರ್ತೆಯ ಪೇಳಿ ರಾಗಟಿಯ। ಸ್ವಾಮಿ ಗರ್ಪಿಸಿದ ಬಲವಂತ ಹನುಮಂತ॥ ೧॥ ರಾಜಸೂಯುವ ಮಾಡುವದಕೆ ಮಾಗಧನ ಕೊಂದೆ। ಮಾಜಿಸಿದಿ ಕುರುಪತಿಯ ಸಂತತಿಯನೂ॥ ಸೋಜಿಗವೊ ನಿನ್ನ ಲೀಲೆ ಯು ಅಯುಜಾತ ಬಿ। ಡೌಜರಕ್ಷಕ ದ್ರೌಪದೀಶ ಬಲವಂತ॥ ೨॥ ಬುಧಮಧ್ಯಗೇಹರಲ್ಯವತರಿಸಿ ಕುಮತಗಳ। ಬೆದರಿಸಿ ತ್ರಿದಶ ಸಪ್ತಗ್ರಂಥ ಮಾಡೀ॥ ಸುದಯದಿಂದುತ್ತುಮರಿಗಿತ್ತು ಮತವನು ನಿಲಿಸಿ। ಬದರಿ ಯೊಳು ಪ್ರಾಣೇಶವಿಠ್ಠಲನಲ್ಲಿರುವೇ॥ ೩॥ ಶ್ರೀ॥

೪೪. ರಾಗ ಭೈರವಿ, ಝಂಪೆತಾಳ.

ಜಯ ಮಂಗಳಂ ನಿತ್ಯ ಶುಭಮಂಗಳಂ। ಅಂಜನೇಯ ಸುತಗೆ ಅಗ ಣಿತ ದನುಜ ಸಂಹರಗೆ। ಕಂಜನಾಭನ ಭಜನೆ ಮಾಡುವವಗೇ॥ ಭುಂಜಿಸಿ ವಿಷವ ಸುರರಸಂಘ ಗೆಲಿಸಿದವನಿಗೆ। ಸಂಜೀವನವ ತಂದ

ಹನುಮಂತಗೇ ॥ ೧ ॥ ಕುಂತಿನಂದನ ವೃಕೋದರಗೆ ಅಘದೂರಗೆ । ಸಂತರೊಡೆಯಗೆ ದ್ರೌಪದಿಯರಸಗೆ ॥ ಅಂತಕಾತ್ಮಜಗೆ ಉಪದೇಶವನು ಮಾಡ್ದವಗೆ । ಚಿಂತೆರಹಿತಗೆ ಭಕ್ತಜನಪಾಲಗೆ ॥ ೨ ॥ ಕಲಿಯುಗದಿ ಮಧ್ವಮುನಿಯಾಗಿ ಅವತರಿಸಿದಗೆ । ಹಲವು ಮತಗಳ ಸೋಲಿಸಿದ ಧೀರಗೆ ॥ ಸುಲಭಜ್ಞಾನವ ಬುಧರಿಗೊರದ ದಯಸಾಗರಗೆ । ಕಲಿಹ ಪ್ರಾಣೇಶವಿಠಲನ ದಾಸಗೇ ॥ ೩ ॥ ಶ್ರೀಃ ॥

## ೪೫. ರಾಗ ನಾಟಿ, ಝಂಪೆತಾಳ.

ನಮೊ ನಮೊ ಶ್ರೀಭೀಮ । ನಮೊ ನಮೊ ಜಿತಕಾಮ । ಕಮಲಾಕ್ಷ ದಾಸ ಪೂರಿಯುಬ್ಜಾಪ್ತಭಾಸ ॥ ಪಲ್ಲ ॥ ಘನಗಿರಿಯೊಳಗೆ ಕುಂತಿ ನಿನ್ನೆತ್ತಿಕೊಂಡಿರಲು । ಧ್ವನಿಮಾಡೆ ಹುಲಿ ತಾಯಿ ನಡುಗಿ ಬಿಸುಡೇ ॥ ತನುವು ನಿನ್ನದು ಸೋಂಕಿ ನಗವಡದು ಶತಶೃಂಗ । ವೆನಿಸಿಕೊಂಡಿತೊ ದ್ವಾಪರದಿ ಬಲವಂತ ನಮೊ ॥ ೧ ॥ ಲೋಕದೊಳು ಮನುಜರಾ ಶಿಶುಗಳಂದದಿ ಬೆಳದು । ಪಾಕಶಾಸನಿ ಯಮಜ ಯಮರ ಜನನೀ ॥ ಯಾ ಕೂಡಿಕೊಂಡು ಇಭಪುರಿಗೈದಿ ಮೋದದಲಿ । ಸಾಕಿಸಿಕೊಂಡಿ ಅಂಬಿಕೆಯ ಮಗನಿಂದ ॥ ೨ ॥ ಚಿಕ್ಕವರೊಡನೆ ಚಂಡುಬೊಗರಿ ಈಸಿಕೆ ಪೋಟೆ । ತೆಕ್ಕಿಮುಷ್ಟಿ ಮರಗಳ ಏರುವಲ್ಲೀ ॥ ಸೊಕ್ಕಿದವನಿವನೆಂದು ಆವಾಗಲೆಲ್ಲರಿಗೆ । ಬಿಕ್ಕಿ ಬಾಯ್ದೆರವಂತೆ ಮಾಡಿ ತೋರಿಸಿದೀ ॥ ೩ ॥ ಅಹಿತರಾದವರು ನೀರೊಳಗೆ ಕೆಡಹಲು ಎದ್ದಿ । ಅಹಿಗಳಂ ಕಚ್ಚಿಸಲು ನೋಯದಿದ್ದೀ ॥ ಸಹಿಸದಲೆ ವಿಷ ಹಾಕೆ ಬದುಕಲಿಕೆ ಹೊರಘಾಕೆ । ಮಹಾ ಮೋಸಮಾಡೆ ಗೆದ್ದು ಧರೆಯೊಳು ಮೆರದೇ ॥ ೪ ॥ ಸೋಕಿಯಸುರಿಯ ಮಗನ ಪಡೆದು ಖಳನಂ ತರಿದು । ಏಕಚಕ್ರಾನಗರದಲ್ಲಿ ಇದ್ದೂ ॥ ಬೇಕೆಂದು ನೀನಾಗಿ ಪೋಗಿ ಬಕನನು ಕೊಂದಿ । ಈ ಕುಂಭಿನಿಯೊಳು ನಿನಗಿದಿರಾರು ದೇವಾ ॥ ೫ ॥ ಪಾಂಚಾಲಿಯನು ಘಳಿಸಿ ಕೋಪದಿಂ ಬಂದ ಹರಿ । ವಂಚಕರ ದರ್ಪ ಭಂಗಿಸಿ ಲೀಲೆಯಿಂ ॥ ಮಿಂಚುವ ಗದೆಯುಲಿಹ ನಿಶ್ಚಿಂತ ಬಲವಂತ । ಮುಂಚಿನಜ ಪ್ರಣತಸುರಭೂಜ ರವಿತೇಜ ॥ ೬ ॥ ಈ ಪರಿಯಲಿಂದ

ಕೆಲವು ದಿವಸವಲ್ಲಲ್ಲಿ । ಕಾಪಾಡಿ ವಜ್ರಪ್ರಸ್ಥವಲಿ ಬಂದೂ । ಪಾಪಿ ಜರಿ
ಜನ ಕೊಂದು ರಾಜಸೂಯವ ಮಾಡಿ । ನೀ ಪಾಲಿಸಿದೆಯಮನ ಸದ್ಧರ್ಮ
ದಿಂದಾ ॥ ೭ ॥ ದ್ಯೂತನಾಡಿದ ಸಮಯದಲ್ಲಿ ದ್ರೌಪದಿಯಳನು । ಪಾತಕಿ
ವಸನವೆಳೆಯೇ ಕೋಪದಿಂದ ॥ ಘಾತಿಸುವೆನೆಂದಬ್ಬರಿಸಿ ಪಲ್ಗಡಿದು
ಲಕ್ಷ್ಮೀ। ನಾಥನಿಚ್ಛೆಗೆ ಹೀಗೆಂದು ಕೈಮುರದೇ ॥ ೮ ॥ ತಮೊ ಯೋಗ್ಯನು
ಪಾಪಪೂರ್ಣವಾ ಹದಕೆ । ಬಹು ಮಿತಿಯಿಂದ ವನವಾಸಾಪತ್ಕರಿಸಿದೆ ॥
ಸಮರಂಗದಲಿ ಇವರ ಹೀಗೇ ಸವರುವೆನೆಂದು । ಸುಮನಸಾರಾಧ್ಯ
ಬಾಹುಗಳೆತ್ತಿ ನಡದೇ ॥ ೯ ॥ ಕಾನನದಿ ಕಿಮ್ಮೀರನ ಕೊಂದು ಋಷಿ
ಯಿಂದ । ಮಾನನ ಕೈಕೊಂಡು ಮತ್ತು ಮುಂದೇ ॥ ಆ ನಗದಿ ಬಹು
ಕಾಲ ಸೇರಿಕೊಂಡಿದ್ದಂಥ । ದಾನವರ ಮಡುಹಿ ಸೌಗಂಧಿಕವ ತಂದೇ ॥
॥ ೧೦ ॥ ನಿನ್ನೊಳಗೆ ನೀ ಲೀಲೆ ಮಾಡಿದಾ ಸಮಯದಲಿ । ಚಿನ್ನದುಪಮೆ
ಒಂದು ಪುಷ್ಪ ಬೀಳೆ ॥ ನಿನ್ನರಸಿ ಇದು ಯೆನಗೆ ಇಷ್ಟವೆನಲವಳ ನುಡಿ ।
ಮನ್ನಿಸುತ ಪೋಗಿ ಮಣಿಮಂತನೊಂಚಿಸಿದೇ ॥ ೧೧ ॥ ದ್ವೈತವನದಲಿ
ಬಂದು ಮೃಗಬೇಟೆಯಾಡೆ ಪುರು । ಹೂತ ಪದವಾಳ್ದವನು ಮೈಗೆ
ಸುತ್ತೇ ॥ ನೀ ತವಕ ಬೀಳದಲೆ ಅವನ ಪುನೀತನ ಮಾಡಿ । ಖ್ಯಾತಿ ತಂ
ದಿತ್ತಿ ಅಂತಕಸುತನಿಗೆಂದು ॥ ೧೨ ॥ ಮತ್ಸ್ಯದೇಶಾಧಿಪನ ಮನೆಯಲ್ಲಿ
ಇದ್ದಾಗ । ಹೆಚ್ಚಿನ ಬಲದ ಮಲ್ಲನ ಕೆಡಹಿದೇ ಅಚ್ಚ ಪಾಪಾತ್ಮ ಕೀಚ
ಕನನ್ವಯವ ತರಿದೇ । ಅಚ್ಯುತನ ನಿಜದಾಸ ಭಕ್ತರಘನಾಶ ॥ ೧೩ ॥
ಎಂಟೈದು ವರುಷ ಈ ರೀತಿಯಲಿ ಕಳೆದು ವೈ । ಕುಂಠಪತಿ ದಯದಿಂದ
ಉಪಪ್ಲಾವ್ಯದೀ ॥ ಗಂಟು ಹಾಕಿದಿ ದುರಾತ್ಮನ ಕೂಡೆ ಸಂಗರಕೇ । ಕಂ
ಠೀರವರವದಿಂ ತಲೆದೂಗಿ ನಡದೀ ॥ ೧೪ ॥ ಮುತ್ತ್ಯ ಭೀಷ್ಮಗೆ ಒಂದು
ಸ್ವಲ್ಪ ಮಾತ್ರಕೆ ಮಾನ । ಎತ್ತಂತೆ ತೋರಿ ಯೆಲ್ಲರ ರಥವನು ॥ ಕತ್ತ
ರಿಸಿ ಹಿಂದಕ್ಕೋಡಿಸಿದಿ ನಿನ್ನಾರ್ಭಟಕೆ । ಹತ್ತು ದಿಕ್ಕಿನೊಳೊಬ್ಬರಿದಿರಾಗ
ಲಿಲ್ಲಾ ॥ ೧೫ ॥ ಪ್ರಹ್ಲಾದನವತಾರ ಬಾಹ್ಲೀಕನನು ಗೆದ್ದು । ಮಹಿಜ
ಸುತನಾನೇ ಮಸ್ತಕ ಸೀಳಿದೆ ॥ ಬಹು ಖೋಡಿ ಧಾರ್ತರಾಷ್ಟ್ರರ ಕೊಂದು
ತುಳಿಬಿಟ್ಟೆ । ಅಹಿಯಂತೆ ರಣರಂಗದಲ್ಲಿ ಸಂಚರಿಸೇ ॥ ೧೬ ॥ ಕಡು

ಕೋಪದಿಂದ ಹೂಂಕರಿಸಿ ವುರಿಯುಗುಳುತಲಿ । ಪೊಡವಿ ನಡುಗಿಸಿ ನಭವ ಬೆಯ್ಯುಸುತಲೀ ॥ ಪಿಡಿದು ದುಃಶಾಸನನ ತೊಡೆಯಲ್ಲಿ ನೆರೆಗೆಡಹಿ । ವಡಲ ಭೇದಿಸಿ ರಕ್ತ ಮಜ್ಜನವ ಗೈದೆ ॥ ೧೭ ॥ ಕರಳ ದಂಡೆಯ ಮಾಡಿ ಅರಸಿ ಮುಡಿಗೆ ಮುಡಿಸಿ । ಖರೆಯ ಮಾಡಿದಿ ಉಭಯತರ ಶಪಥವ । ಕರದಿ ಕುರುಪಾಂಡವರು ಬಿಡಿಸ ಬನ್ನಿರಿಯೆಂದು । ಮರುಳುಗೊಂಡರೊ ನಿನ್ನ ರೂಪವ ನೋಡುತಲೀ ॥ ೧೮ ॥ ಸ್ವಾಮಿ ಪ್ರಾಣೇಶ ವಿಠ್ಠಲನ ಆಜ್ಞೆಯ ವಹಿಸಿ । ಭೂಮಿ ಭಾರಿಳುಹುದಕೆ ಅವತರಿಸಿದೀ ॥ ನಾ ಮಾಡುವೆನೆ ಪೂರ್ತಿ ನಿನ್ನ ಮಹಿಮೆಯ ಸಮರ । ಭೀಮ ಕರ ವಿಡಿದು ಸಲಹುವದೊ ಪ್ರತಿದಿನದೀ ॥ ೧೯ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೬. ರಾಗ ಸಾರಂಗ. ಏಕತಾಳ.

ರೋಚನ ಪೂರ್ವೇಂದ್ರ ಧೀರ ಪರಾಕೂ । ಖೇಚರ ಸರ್ವ ಚೇಷ್ಟಕನೇ ಪರಾಕೂ । ಯಾಚಕರಿಗೆ ಕಲ್ಪತರುವೆ ಪರಾಕೂ । ಸುಚಾಮಿಾಕರವರ್ಣ ದೇವ ಪರಾಕೆಂದು ಸ್ತುತಿಸಿ ಆರತಿಯಾ ಬೇಳಗಿರೇ ॥ ಪಲ್ಲ ॥ ಜಾನಕಿ ಪತಿದೂತ ವಾಯು ಪರಾಕೂ । ದಾನವರಳಿದವಿಕ್ರಮನೆ ಪರಾಕೂ ॥ ಜ್ಞಾನಿಗಳೊಡೆಯ ಕೇಸರಿಜ ಪರಾಕೂ । ದೀನರಕ್ಷಕ ಹನುಮಂತ ಪರಾಕೆಂದು । ಮಾಣಿಕ್ಯದಾರತೀಯಾ ಬೇಳಗಿರೇ ॥ ೧ ॥ ದ್ವಾಪರಾನುಗರಾರಿ ಭೀಮ ಪರಾಕೂ । ಪಾಪಿ ಜರಾಸಂಧನ ವೈರಿ ಪರಾಕೂ ॥ ಭೂಪರಶರೆ ಬಿಡಿಸಿದನೆ ಪರಾಕೂ । ದ್ರೌಪದಿಪತಿ ವೃಕೋದರನೆ ಪರಾಕೆಂದು । ದೀಪದಾರಾತೀಯಾ ಬೇಳಗಿರೇ ॥ ೨ ॥ ಗುರುಮಧ್ವ ಮುನಿರಾಯಾ ಆರ್ಯ ಪರಾಕೂ । ವರಗ್ರಂಥ ವಿರಚಿಸಿದವನೆ ಪರಾಕೂ ॥ ಧರೆಯೊಳು ಬದರಿನಿವಾಸ ಪರಾಕೂ । ಶಿರಿ ಪ್ರಾಣೇಶವಿಠ್ಠಲನ ಪ್ರಿಯ ಪರಾಕೆಂದು ಹರದೇರಾರಾತೀಯ ಬೆಳಗಿರೇ ॥ ೩ ॥ ಶ್ರೀಃ ॥

## ೪೭. ರಾಗ ಸಾರಂಗ, ತ್ರಿವುಡೆತಾಳ.

ಇಂದ್ರಸೇನಾನಾಥಾಹೊ । ತ್ರಿಲೋಕ ವಿಖ್ಯಾತಹೊ । ಸವ್ಯಸಾಚಿ ಪ್ರೀತಾಹೊ । ಮಧ್ಯಗೇಹಜಾತಾಹೊ । ಇಂದ್ರಸೇನಾನಾಥಾಹೊ ॥ ಪಲ್ಲ ॥

ತರಣಿ ಬಿಂಬಕೆ ಚಿಗಿದೆ । ಗದೆಯಲಿ ವಗಿದೆ ಅಸುರಗೆ । ಮುಗಿದೆ ಕರ ವನು ಹರಿಗೆ । ವಾರ್ತೆಯ ತಂದೆ । ಜರೆಜನ ಕೊಂದೆ । ಬದರಿಲಿ ನಿಂದೆ ಖಳಕುಲ ॥ ತರಿದೆ ವಜ್ರ ಶರೀರ । ಧರಣಿಯ ಭಾರವಿಳುಹಿ । ದುದಾರ ಮತಿ ಕಪಿ । ವರ ನೀ ಗತಿ ದಯಮಾಡ್ದೇ । ದಾನವ ಬೇಡ್ದೆ । ಸುಮ ತಿಯ ನೀಡ್ದೆ ॥ ೧ ॥ ದಂಡ ಮೇಖಲಾ ಧರ । ಕುಜನ ಕುಠಾರ । ಬ್ರಹ್ಮ ಶರೀರ ಜೈಸಿದೇ ॥ ಮಂಡೋದರಿ ವಲ್ಲಭನ । ಚರಿಸಿದಿಯೊ ವನ । ತಂದೆ ಮಾಧವನ ಉಡುಪಿಗೆ ॥ ಚಂಡ ವಿಕ್ರಮ ರಾಮ ಸೇವಕ । ಭೀಮ ಸದ ಚರ ಧಾಮಯತಿ ಮೇ । ಪಾಂಡವನ ಮೊರೆ ಕೇಳ್ದೆ । ಕೀಚಕನ ಶೀಳ್ದೆ । ದ್ವಿಜಕುಲವಾಳ್ದೆ ॥ ೨ ॥ ಲಕುಮಿಗುಂಗುರ ಕೊಟ್ಟೆ । ರಣಕಹಿ ಘಟ್ಟೆ ಶಾಟಿಯನುಟ್ಟೆ ॥ ಶರಧಿ ತವಕದಿ ಕ್ಷಣದೊಳು ಹಾರ್ದೆ । ಉಂಗುರವ ತೋರ್ದೆ । ಜ್ಞಾನವ ಬೀರ್ದೆ । ಲಂಕೆಯ ಸಕಲ ಸೌಖ್ಯವ ಕೆಡಿಸಿ । ಪುಷ್ಪವ ಮುಡಿಸಿ । ಐಕ್ಯವ ಬಿಡಿಸಿ । ವಟುವವು ಮುಕುತಿಪತಿ ಪ್ರಾಣೇಶ । ವಿಠಲನ ದಾಸ । ಸಲಹೊ ನಿರ್ದೋಷ । ಇಂದ್ರಸೇನಾನಾಥಾಹೊ ॥ ೩ ॥

೪೮. ರಾಗ ವರಾಳಿ, ತ್ರಿವುಡೆತಾಳ.

ಮಾರುತ ದೇವರ ಹೊಂದಿರೋ ಮೂಜಗದ ಗುರು । ಮಾರುತದೇವರ ಹೊಂದಿರೊ ॥ ಮಾರುತದೇವರ ಹೊಂದಿದವರ ಪಾಪವು ಹೋಗಿ । ಹರಿ ಮಂದಿರವ ಯ್ಯೈದುವವಕೆ ಸಂದೇಹವಿಲ್ಲ ॥ ಪಲ್ಲ ॥ ದಶರಥಸುತನಂಗ ನೆಯ ಕದ್ದೊಯ್ದಿರಲಾಗಿ । ದಶಕ ವಾನರಸ್ತೋಮ ರವಿಜನಾಜ್ಞಾ ॥ ದೇಶಯಿಂದೆಲ್ಲ ರಾಶಿಭಯದಲಡಗಿ ರಕ್ಷಿಸೊ । ಶ್ವಸನ ಯೆನಲು ಪೋಗಿ ಶೀಘ್ರವಾರ್ತೆಯ ತಂದ ॥ ೧ ॥ ಕುರುಜನುಪಟಳಕ್ಕೆ ಪಾರ್ಥರಳಲಿ ವನಾ । ಚರಿಸಲು ತವಕ ಬೀಳದೆ ಪ್ರಾಂತಕ್ಕೆ । ದುರುಳರ ಸದದು ಭೂ ಭಾರ ಕಳೆದು ಸಹೋ । ದರರಾ ಪ್ರೀತಿ ಬಿಡಿಸಿ ಕೃಷ್ಣನ ದಯ ಪಡದ । ಗುಣಪೂರ್ಣಾನಘ ಶ್ರೀಪ್ರಾಣೇಶವಿಠ್ಠಲನ । ನಿರ್ಗುಣನೆಂದಾ ಸುರರು ದುರ್ಮತ ಸ್ಥಾಪಿಸೇ । ಘನಶಾಸ್ತ್ರ ವಿರಚಿಸಿ ಐಕ್ಯವ ಬಿಡಿಸೀ । ಸಜ್ಜನರ ಪೊರೆವ ಶ್ರೀಆನಂದ ಮುನಿಪರೆಂಬ ॥ ೩ ॥ ಶ್ರೀಃ ॥

## ೪೯. ರಾಗ ಶಂಕರಾಭರಣ. ಅಟತಾಳ.

**ಪ**ವಮಾನ ರಾಯಾ ಪಾವನ ಕಾಯಾ । ಕಾಯೊ । ದಿವಿಷತ್ಪೂಜಿತ ಕವಿಜನಗೇಯಾ ಪವಮಾನರಾಯಾ ॥ ಪಲ್ಲ ॥ ಭಕ್ತವತ್ಸಲ ದೇವಾ ರವಿ ತೇಜಾ । ಸರ್ವೋದ್ರಿಕ್ತ ಪ್ರಣತಜನ ಸುರಭೂಜಾ ॥ ಶಕ್ತಾ ಲೋಕೈಕ ಅನಂತಜ । ಭುಕ್ತಿ ಮುಕ್ತಿದಾಯಕ ದಿತಿಜಾಬ್ಧಿದ್ವಿಜರಾಜ ॥ ೧ ॥ ದುರಿತಾಂಬುಧಿಘಟಜ ಕಾಳೀಶ । ಸರುವ ಸುರವಂದ್ಯ ಪದಕಂಜ ನಿರ್ದೋಷ । ಪುರರಿಪು ಪಿತ ಪಯೋಧರ ಭಾಸ । ಸಾರೆಗರದು ಪೂರ್ತಿಸೊ ಯೆನ್ನ ಅಭಿಲಾಷ ॥ ೨ ॥ ಪೌಲಸ್ತ್ಯಾನುಜವರಾನುಜ ರಕ್ಷ । ಶ್ರೀಗೋಪಾಲ ನವನೆ ನೀನೆನಿಸುವದುಪೇಕ್ಷಾ ॥ ನೀಲೀಶತವಮಾಡದೆ ತಾ ರಕ್ಷಾ । ವಂದ್ಯ ಕಾಲಿಗೆರಗುವೆ ದುರ್ಜನ ಶಿಕ್ಷಾ ॥ ೩ ॥ ಮಧುಸಖ ಪಾಲಾನುಜ ಪಾದಾರ । ವಿಂದ । ಮಧುಕಾರ ದಂಡ ಮೋಖಲ ಧರ ॥ ವಿದುರಾಗ್ರಜ ನಂದನ ಸಂಸಾರಾ । ರಣ್ಯ । ಸುಧನಂಜಯ ವೃಕೋದರ ಸವಿಾರ ॥ ೪ ॥ ಕುಟಿಲ ರಹಿತಮುಜುಗಣಾಧೀಶ । ಶ್ರೀಧೂ । ಜರ್ಟಿವಂದ್ಯ ಭಕ್ತಿಯಿಂದ ಪ್ರಾಣೇಶ । ವಿಠಲನ್ನ ಭಜಿಸುತ್ತ ಸದ್ದಾಷ್ಯ । ವನ್ನು ಪಠನೆ ಮಾಡಿಸೊ ದಯುದಿಂದನಿಶಾ ॥ ೫ ॥ ಶ್ರೀಃ ॥

## ೫೦. ರಾಗ ಕಾಂಬೋಧಿ. ಏಕತಾಳ.

**ಬಾ**ಣವದನ ಸಲಹೊ । ನಾ ನಮಿಸುವೆ । ಬಾಣವರದ ನಿನಗೇ । ಹರ ಹರ ಬಾಣ ॥ ಪಲ್ಲ ॥ ಗಜಮುಖಿ ಅಂಬಕನೇ । ಪಶುಪತಿ । ತ್ರಿಜಗದಿ ಪೂಜಿತನೇ ॥ ಹರಹರ ಅಜಿನಾಂಬರ ಧರನೇ । ಕರುಣಿಸೊ । ವಿಜಯೋಕ್ಷಣ ಶಿವನೇ ॥ ಹರಹರ ॥ ೧ ॥ ಕುಧ್ರೇಡ್ಜ ಮುಖಕಂಜ । ರವಿಯುಘ । ಅದ್ರಿಸಮುಹ ಖುಷಿಜಾ । ಹರಹರ ॥ ನಿದ್ರೆರಹಿತ ವಿಧಿಜ । ಸತತ ಅ । ಭದ್ರ ಭಕ್ತರಿಗೆ ಕುಜ । ಹರಹರ ॥ ೨ ॥ ಕಾವಮಾದಿ ಮುಖಜನಕ । ಧೂರ್ಜಟಿ । ಭೂಮಿಜ ವೈರಿ ಸಖ । ಹರಹರ ॥ ಸಾಮಜರಿಪು ಧನಿಕ । ಮಿತ್ರನೇ । ಕಾಮಿತ ಫಲದಾಯಕ । ಹರಹರ ॥ ೩ ॥ ಧರೆಜರಮಣ ನಾಮ । ಸರ್ವದಾ । ಸ್ಮರಿಸುವ ನತಪ್ರೇಮ । ಹರಹರ ॥ ಗರಳನಾಶನ

ಭೀಮ । ವಿಕ್ರಮ । ಸರೋಜಧ್ವಜ ವಿರಾಮಾ । ಹರಹರ ॥ ೪ ॥ ಘನ ನಿಭ ಪ್ರಾಣೇಶ । ವಿಠ್ಠಲ । ನನುಗನೆನಿಪದ ನಿಶ । ಹರಹರ ॥ ಘನ ಮಹಿ ಮನೆ ಈಶ । ಕುಧರಸದನ ನಾಕಜಪೋಷ । ಹರಹರ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೧. ರಾಗ ವರಾಳಿ, ಏಕತಾಳ.

ಪಾರ್ವತಿಪತಿ ಪಾಹಿ । ಪಾರ್ವತಿಪತಿ ನೀನೊಲಿದು ಮನಸಿನೊಳು । ತೋರ್ವದು ಕೇಶವನಾ । ಹರಹರ ॥ ಪಲ್ಲ ॥ ವಿಜಯ ನಿನ್ನೊಳಗಂದು । ವಿಜಯಿಸಲಸ್ತ್ರವ ತ್ರಿಜಗವರಿಯೆ ಕೊಟ್ಟೇ । ಮಜ ಭಾಪುರೇ ಅಂ । ಬು ಜಸುತ ನಂದನ ಗಜ ಚರ್ಮಾಂಬರನೇ । ಹರಹರನೇ ॥ ೧ ॥ ಜಾತ ವೇದಸ ಶ । ಶೀ ತರಣಿನಯನ । ಮಾತರಿಶ್ವ ತನಯ ॥ ಭೂತಗಣಪ ಗುಣ । ವ್ರಾತ ನಿನ್ನವರೊಳು । ಪ್ರೀತಿಯಿಂದಲಿ ಕೂಡಿಸೊ । ಹರಹರ ॥ ॥ ೨ ॥ ಕ್ಷಿತಿಧರಶರ ಮ । ನ್ಮಥಪುರಹರಣ ಪ್ರ । ಮಥಾಧಿಪ ಹರಿ ಣಾಂಕ । ನತಿಸುವೆ ನಿನ್ನನು । ಪ್ರತಿ ದಿನದಲಿ ಸನ್ಮತಿ ಕರುಣಿಸು ತ್ವರಿಯಾ । ಹರಹರ ॥ ೩ ॥ ಸುರಸೇವಿತ ಪದ । ಅರವಿಂದನಘ ಮು । ರ ರಿಪುಸಖ ಕಪರ್ದಿ ॥ ಚರಣವ ನಂಬಿದ । ವರ ಭಯವಾರಿದ । ಮಾರುತ ಕುಶಂದನನೇ । ಹರಹರ ॥ ೪ ॥ ಖಟ್ವ ಪಾಣಿಖಳ । ಅಟವಿ ವಹ್ನಿ ಧೂ । ರ್ಜಟಿ ಹರ ಪ್ರಾಣೇಶ ॥ ವಿಠಲನ ಭಜನೆಯು । ಘಟಿಕೆ ತಪ್ಪದಲಿ । ಘಟನೆ ಮಾಡಿಸುವದೊ ॥ ೫ ॥ ಶ್ರೀಃ ॥

## ೫೨. ರಾಗ ಶಂಕರಾಭರಣ, ಅಟತಾಳ.

ವಸುಧಿಜೆ ಸೀತೆ ವೈದೇಹೀ । ನಾ ನ । ಮಿಸುವೆ ಪಾದಾಬ್ಜಕೆ ಪಾಹೀ । ಅಹ । ದಶಕಾರಿಸತಿ ವಿಧಿ । ವೃಷಭೇಶ ಪೂಜಿತೇ । ಬಿಸಜ ಮಂದಿರೆ ದೀನ । ಅಸುರೇತರಾಂಘ್ರಿಪೆ ವಸುಧೀಜೆ ॥ ಪಲ್ಲ ॥ ಉದಿತ ಭಾಸ್ಕರ ಸಮ ಕಾಂತೆ । ದೇವಿ । ಪದುಮೇಶ ಗಮನೇ ನಿಶ್ಚಿಂತೆ । ಪಯೊ । ದಧಿಜಾತೆ ಅಸುರಕೃತಾಂತೆ । ಯೆನ್ನ । ಹೃದಯಾರ್ತಿ ಕಳಿಯೆ ಜಯಂತೇ ॥ ಅಹ । ಮಧುಕೈಟಭಾರಿಯ ಹೃದಯನಿಕೇತನೆ । ಚದುರೆ ಶ್ರೀರೂಪಾದಿ । ಬುಧ

ಜನರ ಪೊರವೆ ॥ ೧ ॥ ರಾಜೀವವುಪಮ ಸುನೇತ್ರೇ । ಸುವಿ । ರಾಜೀಸೂತಿಹೆ ಶುಭಗಾತ್ರಿ । ಮೃಗ । ರಾಜ ಮಧ್ಯಳೆ ಮುನಿಸ್ತೋತ್ರೆ । ಮುಕ್ತಿ । ಭಾಜಪ್ರಿಯಳೆ ನೃಪಪುತ್ರಿ ॥ ಅಹ । ಶ್ರೀಜನಾರ್ದನನಾಜ್ಞೆ । ವ್ಯಾಜದಿಂ ಭೂದೇವಿ । ರಾಜಸರಿಗೆ ದ್ವಂದ್ವ । ಭೋಜನ ಗೈಸುವೇ ॥ ೨ ॥ ಖಚರಾಳು ಬಂಧಾನ ನಿಟಿಲ । ನೇತ್ರ । ಖಚರವಂಶೋದ್ಭವ ಚಟುಲ । ದೇವ । ಖಚರಾಜ ಪ್ರಾಣೇಶವಿಠಲ । ರಾಣಿ । ಖಚರಾಸ್ಯೆ ಕಳಿಯುನ್ನ ಕುಟಿಲ । ಆಹ । ಖಚರಾಪಸ್ಯಂದನೆ । ಖಚರ ಸುವಾಣೀ ತೇ । ಖಚರಾಸ್ಯ ವೇಣಿಯೆ । ಖಚರ ಮರ್ದನೆ ದುರ್ಗೆ ॥ ೩ ॥ ಶ್ರೀಃ ॥

೫೩. ರಾಗ ಕಾಂಬೋಧಿ, ಅಟತಾಳ.

ನೀನು ಸ್ನೇಹವ ಮಾಡಿದಿರಿ ಯಮ್ಮ । ಮುಖ್ಯ । ಪ್ರಾಣಸಖನ ಬಗೆ ಹೀಗೆಂದು ತಿಳಿಯದೇ । ಯೇನು ಸ್ನೇಹವ ಮಾಡಿದಿರಿಯಮ್ಮ ॥ ಪಲ್ಲ ॥ ಉಣಿಸುವ ಬೇಡಿದ್ದನೆಂಬಿರಾ । ಶ್ರೀವಾ । ಮನನಾಗಿ ತಿರಿದುಂಡ ಬಲಿಯಲ್ಲಿ ॥ ಘನ ವಸನವ ಉಟ್ಟೇರೆಂಬೀರಾ । ಅನು । ದಿನ ದಿಗಂಬರನಾಗಿ ತಿರುಗುವ ॥ ೧ ॥ ಮಣಿ ಭೂಷಣವ ಇಟ್ಟೇರೆಂಬಿರಾ । ಆ ವಾ । ಹಣ ವೀರೆ ಅಡವಿಯೋಳಿರುವನೇ ॥ ತನುನೋಡಿ ಮರುಳಾದೆವೆಂದಿರಾ । ನೀಲ । ಘನದಂತೀರುವ ದೊಡ್ಡ ಚಲುವಿಕೇ ॥ ೨ ॥ ದುರಿತ ಬಂದರೆ ಕಾಯ್ವನೆಂಬೀರಾ । ತಾನೇ । ಕರೆಕರೆ ಬಟ್ಟ ದನುಜನಿಂದ ॥ ಪುರುಷಾನು ಗುಣವಂತನಂದೀರಾ । ಪಾಲ್ಮೊ । ಸರು ಕದ್ದು ತಿಂಬುವ ವ್ರಜದೊಳು ॥ ೩ ॥ ಕಡು ದಯಾವಂತನೆಂದರಿದಿರಾ । ಶಿರ ಕಡಿದ ಮಾತೆಯಾದಯೆ ನೋಡಿರಿ ॥ ನುಡಿಗೇಳಿ ಮರುಳಾದೆವೆಂದಿರಾ । ನಭ । ಪೊಡವಿ ನಡುಗುವಂತೆ ಕೂಗೂವಾ ॥ ೪ ॥ ಜ್ಞಾನಿ ಈಕೃಷ್ಣನೆಂದರಿದೀರಾ । ನಿತ್ಯ । ಕಾನನದೊಳು ದನ ಗಾಯ್ವನೂ ॥ ತಾನೆ ಕಾಣದವನು ಒಬ್ಬರು । ಬೇಡ । ಲೇನು ಕೊಡುವನೆಂಬುವರೂ ಜನರೂ ॥ ೫ ॥ ಯೆನಗೆ ತಿಳಿಯದೇನು ಮಾಯವೊ । ಅವನ । ಮನೆಯ ಪೊಕ್ಕವರೆಂದು ತಿರುಗಾರು ॥ ಅನುಗಾಲ ಗೆಳೆತಾನ ಮಾಡಿದಾ । ಘಾಲಾ । ಕ್ಷನು ಸುಡುಗಾಡೊಳು

ಸೇರಿದಾ ॥ ೬ ॥ ಎಂತು ಪೇಳಿದರೆ ತೀರಿತಮ್ಮ । ನಮ್ಮ । ಕಂತುಪಿತನ ಮಹಾ ಮಹಿಮೆಯಾ ॥ ಅಂತಕಜ ಪ್ರಾಣೇಶವಿಠ್ಠಲಾ । ನಮ್ಮ । ಚಿಂತೆಯಾ ಕಳೆಯೆಂದೆರಗೀರಮ್ಮಾ ॥ ೭ ॥ ಶ್ರೀಃ ॥

೫೪. ರಾಗ ಸಾವೇರಿ, ಏಕತಾಳ.

ರಾಮ ಗೋವಿಂದ ಪೂರ್ಣ । ಕಾಮ ಸದ್ಗುಣ ಗಣ । ಧಾಮ ದಶಾನನ ವಿ । ರಾಮ ನತಜನ ಪ್ರೇಮ । ಸೋಮಧರನ ಸಖ । ಕಾಮಜನಕ ಸುರ । ಸ್ತೋಮ ಕರಾರ್ಚಿತ । ವಾಮನ ಪಾಲಿಸೊ ॥ ಪಲ್ಲ ॥ ಮಂದಾರಾಚಲಧರ । ಇಂದಿರೆಯುರಸ ಮು । ಕುಂದ ಲೋಕೇಶ ಶತಾ । ನಂದ ವಂದಿತ ಪರಮಾ । ನಂದ ಯಶೋದೆ ನಂದ । ನಂದನ ಸುದತೀರ । ವೃಂದವ ಮೋಹಿಸುವ । ವೃಂದಾವನ ಸಂಚಾರೀ ॥ ಮಂದಾಕಿನೀ ಪಿತ । ವೃಂದಾರಕ ಗುರು । ತಂದೆ ಸಲಹೊ ಯನ । ಲಂದು ಉದ್ಧರಿಸಿದೀ । ಸಿಂಧೂರ ವರನ ಪು । ರಂದರಜ ಪ್ರಿಯ ಅ । ರಿಂದಮ ಹರಿ ದಶ । ಸ್ಯಂದನ ತನಯನೇ ॥ ೧ ॥ ಪುಂಡರೀಕಾಕ್ಷನೇ ಮಾ । ರ್ತಾಂಡ ಕೋಟಿ ಪ್ರಕಾಶ । ಪುಂಡಕಂಸಾರಾತಿ ಉ । ದ್ದಂಡ ವಿಕ್ರಮನೇ ಭೂ । ಮಂಡಲದೊಳಗೆ ಪ್ರ । ಚಂಡ ಮುಷ್ಟಿಕರನ್ನು । ಹಿಂಡಿ ಬಿಸುಟಿ ಬಲು । ಭಂಡು ಮಾಡಿದಿಯೊ ಆ ॥ ಖಂಡಲನನುಜನೇ । ಭಂಡ ಕುರುಪನಿಗೆ । ದಂಡಿಸಿ ತೋರಿದಿ । ದಂಡಧರನ ಪುರ । ಪುಂಡು ವಿಷವ ಶಶಿ । ಮಂಡೆ ಬಳಲೇ ಭಯ । ಖಂಡಿಸಿ ಸಲಹಿದೀ । ಅಂಡಜವಾಹನ ॥ ೨ ॥ ಪಡೆಯ ಪ್ರಾಣೇಶ ವಿಠ್ಠಲ । ಉಡುಪತೇಜಾನುದೀನ । ಬಿಡದೊಂದೆ ಪರಾಕಾರ । ಪಾಡುವೆ ನಿನ್ನ ಮಹಿಮೆ । ಕಡಲ ರಾಜಾ ಕನ್ನಿಕೆ । ಜಡಜಾಸನ ಮುಖರೂ । ಕಡೆ ಗಂಡಾದ್ದಲ್ಲವೊ ಮ । ದಡ ನರನು ಬಲ್ಲೇನೆ । ದೃಢ ಭಕ್ತರಿ ಗೊರ । ತಡೆಯದೆ ಮುದದಿಂ । ಕೊಡುವ ಸುಮಹಿಮನೆ । ಕಡು ಕೃಪಾ ಮೂರುತಿ । ಕೆಡಿಸೆನ್ನ ಕುಮತಿ । ಪಿಡಿಸು ಸುಪಥವನು । ಬಿಡಿಸು ಭವಭಯವ । ಪೊಡವಿಪ ವರದ ॥ ೩ ॥ ಶ್ರೀಃ ॥

### ೫೫. ರಾಗ ನಾಟಿ, ಝಂಪೆತಾಳ.

ಪಾಹಿ ನಾರಾಯಣನೆ । ಪಾಹಿ ವಾಸುಕಿಶಯನ । ಪಾಹಿ ಗರುಡಧ್ವಜನೆ । ಪಾಹಿ ಕಮಲಾಕ್ಷ ॥ ಪಲ್ಲ ॥ (೧) ಸಂವತ್ಸರಾಶುಕ್ಲಾಂಬರಾಧಾರ ನತಜನಪಾಲ । (೨) ಸಂವತ್ಸರ ಹರೇ ಕಾರುಣ್ಯನಿಧಿಯೇ ॥ (೩) ಸಂವತ್ಸರಕೆ ನಿನ್ನ ಸಮರಾರೊ ತ್ರಿಜಗದೀ । (೪) ಸಂವತ್ಸರ ಜಲಜಕೇ (೫) ಸಂವತ್ಸರುಪಮಾ ॥ ೧ ॥ (೬) ಸಂವತ್ಸರಾಕ್ಷನುತ ಗಜವೈರಿ ಸಂಹರನೆ । (೭) ಸಂವತ್ಸರಾದಿ (೮) ಸಂವತ್ಸರರ ತರದಿಯೊ ॥ (೯) ಸಂವತ್ಸರ ಕುವರನೇ (೧೦) ಸಂವತ್ಸರನೆ ಯೆನ್ನ । (೧೧) ಸಂವತ್ಸರಳಿದು ಕೊಡು (೧೨) ಸಂವತ್ಸರಮತೀ ॥ ೨ ॥ (೧೩) ಸಂವತ್ಸರ ಸಮಗ್ರ ಪ್ರಾಣೇಶವಿಠಲನೆ । (೧೪) ಸಂವತ್ಸರ ಸ್ವಾಮಿ ದೋಷ ದೂರ ॥ (೧೫) ಸಂವತ್ಸರಪಿತ ಶಿರಿ (೧೬) ಸಂವತ್ಸರನೇ ಕ್ಲೇಶ । (೧೭) ಸಂವತ್ಸರ ಮಾಡು ದೀನ ಕಲ್ಪತರು ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೫೬. ರಾಗ ನಾಟಿ, ಝಂಪೆತಾಳ.

ಯೋಗಧರ ತಾತ ಕಭ ಲೋಕಪತಿ ದೇವ ಶಿರಿ । ಯೋಗ ನಿನ್ನ ಪದಕೆ ಶರಣೆಂಬುವೆನು ಕಾಯೊ ॥ ಪಲ್ಲ ॥ ಯೋಗಾಂಡದೊಳ ಹೊರಗೆ ವ್ಯಾಪ್ತ ಗುಣರಹಿತನೇ । ಯೋಗಾಂಬರಾಧಾರ ಘಮುಖ ಜನಕಾ । ಯೋಗ ಗಾತ್ರ ಗಣ ವರ್ಗದ್ವಯ ಅವತಾರ । ಯೋಗ ಪಾಣಿಸುತ ಪ್ರಿಯ । ಸುಮತಿ ಕೊಡು ಜೀಯ ॥ ೧ ॥ ಯೋಗರಾಯಗೆ ಅದೇ ಪದವಿ ಕರುಣಿಸಿ ಕೊಟ್ಟೆ । ಯೋಗೇಶಣಾಸ್ತ್ರಪಿತ ದಂತಿವರದ ॥ ಯೋಗದಲಿ ಮನಸು ನಿಶ್ಚೈಸೊ ಹಾ ಕರ್ತೃತ್ವ । ಯೋಗ ಫಲ ಸ್ವೀಕರಿಸುತಿಹ ಕಂಜನಾಭ ॥ ॥ ೨ ॥ ಯೋಗನಾಗಿಯೊ ದುರ್ಮತಿಗಳಿಗೆಂದಿಗೂ ನೀನು । ಯೋಗಜನ

---

**ಸಂವತ್ಸರಗಳ ಸಂಜ್ಞೆ:**—(೧) ಶುಕ್ಲ, (೨) ಪ್ರಜಾಪತಿ, (೩) ವಿಕ್ರಮ, (೪) ಶ್ರೀಮುಖ, (೫) ಪಿಂಗಳ, (೬) ಚಿತ್ರಭಾನು, (೭) ಖರ, (೮) ರಾಕ್ಷಸ, (೯) ನಂದನ, (೧೦) ಈಶ್ವರ, (೧೧) ದುರ್ಮತಿ, (೧೨) ಸೌಮ್ಯ, (೧೩) ಆನಂದ, (೧೪) ಸರ್ವಜಿತು, (೧೫) ಮನ್ಮಥ, (೧೬) ಕ್ಷಯ, (೧೭) ಪರಾಭವ.

ವಂದ್ಯ ಹಾ ಸಾರಿಪತಿ ನಿನ್ನ । ಯೋಗ ಸೇವಕರೊಳಡೊ ಪ್ರಾಣೇಶ ವಿಠಲನೇ । ಯೋಗಹ್ರಾಸ ವಿವರ್ಜ ಘಟಜಕರಪೂಜ್ಯ ॥ ೩ ॥ ಶ್ರೀಃ ॥

ಶಽ. ರಾಗ ನಾಟಿ, ಝಂಪೆತಾಳ.

ಶರಣು ಭಾರತಿ ತಾಯಿ । ಕರವ ಬಿಡದೆಲೆ ಕಾಯಿ । ಮಾರುತ ದೇವರ ರಮಣಿ । ಸುರನದಿಯ ಭಗಿನಿ ॥ ಪಲ್ಲ ॥ ಪ್ರದ್ಯುಮ್ನ ದೇವಸುತೆ । ರು ದ್ರಾದಿ ಸುರವಿನುತೆ । ಭದ್ರ ವಿಗ್ರಹೆ ದಯಾ ಪ । ಮುದ್ರೆ ಕುಲಿಶೇ ॥ ಅದ್ರಿ ಯೋಪಮ ದೋಷ । ಕಿದ್ದ ದುರ್ಮತಿ ಕ್ಲೇಶ । ವದ್ದು ನಿನ್ನವಸನ್ನು । ಬುದ್ಧಿಕೊಡು ಯೆನ್ನು ॥ ೧ ॥ ನೀರಜಾಂಬಕೆ ಯೆನಗೆ । ತೋರು ಸಾಧನ ಕುನಗ । ಜಾರಿ ಸುಭಕುತಿಯನ್ನು । ತೋರು ಕರುಣ । ವಾರಿಧಿ ಹರಿಯ ಪಾದ । ಆರಾಧಿಸಲು ಮೊದ । ವಾರವಾರಕೆ ಈ ವಾರಣಗಮನೆಯೆ ॥ ॥ ೨ ॥ ಪ್ರಾಣೇಶವಿಠಲನ । ಧ್ಯಾನದೊಳಗಿರಿಸು ಮನ । ಪಾಣಿಪದ ವೈದುವಳೆ । ಮಾನ ನಿನ್ನದಲೆ । ಹೀನ ವಿಷಯಗಳೊಲ್ಲೆ । ನೀನೆ ಸ್ವಾಂ ತದಿ ನಿಲ್ಲೆ । ಕ್ಷೋಣಿಯೊಳಗತಿ ಮಾನಿ । ಜ್ಞಾನಿ ಅಹಿವೇಣಿ ॥ ೩ ॥

ಶ೮. ರಾಗ ದೇಗುಪ್ತಿ, ತ್ರಿವುಪೆತಾಳ.

ಕಾಳಿ ದ್ರೌಪದಿ ಭಾರತಿ । ನಿನ್ನ ಪಾದಕೇ । ಲಾಲಜ ಸುತಿಪೇ ಪ್ರತಿ । ವೇಳೆ ಗಳಲಿ ಲಕ್ಷ್ಮೀ । ಲೋಲನ ಚರಣಾಬ್ಜ । ವಾಲಗವೀಯೋ ಸುಶೀಲೇ ಸ್ವಯಂಭೂಜೆ ॥ ಪಲ್ಲ ॥ ಇಂದ್ರಸೇನ ನಳನಂದಿ । ನಿ ಶಿವ ಕನ್ಯಾ । ನಂದ ಪೂರಿತಳೆ ಚಂದ್ರೀ । ನಿಂದ ಕರಿಪುಜ್ಞಾನ । ಸಾಂದ್ರೆ ಸುಪತಿವ್ರತೆ । ಕಂದು ಗೊರಳ ವಾರುಣೀಂದ್ರ ಅಂಡಜಾಧಿಪ ॥ ಇಂದ್ರ ನಿರ್ಜರ ವೃಂದ ಮುನಿಗಣ । ವಂದಿತಪದಾರ । ವಿಂದೆ ಭವದಲಿ । ನೊಂದೆ ಭಯವಾ । ......ನಿನ್ನೊಡಿ । ...ಂದದಲಿ ಕೊಡೇ । ಮುಂದ ಕರುಣೇ ॥ ೧ ॥ ತರ ಣಿಯಾನಂತಭಾಸ । ಪ್ರದ್ಯುಮ್ನ ದೇ । ವರ ಸುತೆ ಹರೀಶೇ ಕ್ಲೇಶ । ಜರಿಹಿ ಯೆನ್ನಯ ಮೇಲೆ । ಕರುಣಾಪಾಂಗದ ದೃಷ್ಟಿ । ದುರುಳ ಮತಿಯ ಪರಿ । ಹರಿಸಿ ತವಕ ಹರಿ ॥ ಗೆರಗೊ ಮನಕೊಡು । ಪರಮ ಧಾರ್ಮಿಕೆ ।

ಕರವೆ ಬಂದೀಗ ಹೃದಬ್ಜದಿ । ಪುರುಷ ಪರಾಕ್ರಮೆ । ಪರತರಳೆ ಸದಾ । ಪೊರಿಯೆ ಬಿಡದಲೇ ಕರವ ಮುಗಿವೇ ॥ ೨ ॥ ವಾಣಿ ಸುಂದರಿ ವರದೇ । ಸಾಧ್ವಿ ವೀಣಾ । ಪಾಣಿ ಪೇಳುವೆನೆ ಈದೆ । ಹೀನ ವಿಷಯವಲ್ಲಿ । ಪೋಣಿಸಿ ಸುಮತಿ ಶ್ರೀ । ಪ್ರಾಣೇಶವಿಠಲನ । ಧ್ಯಾನದೊಳ್......... ಮಹಾನುಭಾವರ ಸಂಗ ಪಾಲಿಸೇ ॥ ಮಾನಿನೀ ಕುಲ ಮೌಳಿಮಣಿ ಚಂ । ದ್ರಾನನೆ ಮದಗಜಗಮನೇ ಸು । ಶ್ರೋಣಿ ಅಷ್ಟಾಪದ ಸುಕಾಂತೆ ॥ ೩ ॥

### ೫೯. ರಾಗ ಭೈರವಿ, ತ್ರಿಪುಡೆತಾಳ.

ಜಯ ಪಾಂಡುರಂಗಾಹೊ । ಜಲದನಿಭಾಂಗಾಹೊ । ಜಗದಂತರಂಗಾಹೊ । ಜಯಪಾಂಡುರಂಗಾಹೊ ॥ ಪಲ್ಲ ॥ ನೀಲ ಭೂಧರವಾಸ । ಕೌಸ್ತುಭ ಭೂಷ । ರಮೆಯಾಧೀಶ ಸುಮನಸ । ಪಾಲ ಗುಣಗಂಭೀರ । ನವನೀತ ಚೋರ । ಕುಜನ ಕುಠಾರ ನರಹರಿ । ಫಾಲಲೋಚನ ಬಂಧು । ದೈತ್ಯನ ಕೊಂದು । ವೇದವ ತಂದು ದ್ರುಹಿಣಗೆ । ಮೇಲು ಕರುಣದಲಿತ್ತೆ ಮಂದರ । ಪೊತ್ತ ಸುಂದರ ಮೂರ್ತಿ । ಜಯ ॥ ೧ ॥ ನಿಗಮವಂದಿತ ರಾಮ ಹರಿ ಪೂರ್ಣ । ಕಾಮ ಸದ್ಗುಣ । ಧಾಮ ವಾಮನ । ಮಗನ ಮೂಗಿಲಿ । ಪುಟ್ಟಿ ಹೇಮನ । ಕುಟ್ಟಿ ಅವನಿ ತಂ । ದಿಟ್ಟೆ ಈರೇಳು ॥ ಜಗದಿ ಪೂಜಿತ । ನಾದಿ ಕೈಟಭ । ಭೇದಿ ಇಭಪನ । ಕಾಯ್ದು ಪ್ರಣತರ ॥ ಅಘವ ಪೋಡಿಸು । ತಿಪ್ಪ ಹಲಾಯುಧ । ತಲ್ಪ ಮನ್ಮಥ । ನಪ್ಪ ಜಯ ॥ ೨ ॥ ವೇದ ವಿಸ್ತರವಮಾಡ್ದಿ । ದಾನವ ಬೇಡ್ದಿ । ದನುಜಗೆ ಪೋಡ್ದಿ ಕುರುಕುಲ । ಸೂದನ ಕಿರೀಟಿಸೂತ । ಪವಮಾನ ತಾತ । ದುರ್ಬಲನಾಥ ಯೆನ್ನನು । ಆದರದಿ ಕೈಪಿಡಿಯೊ । ದುರಿತವ ತಡಿಯೊ । ದುರ್ಮತಿ ಕಡಿಯೊ । ಅಗಣಿತ ಮೋದಿ ಪ್ರಾಣೇಶವಿಠಲ । ನರಮೃಗನಿಟಿಲ । ನೇತ್ರ ಅಕುಟಿಲ ಜಯ ॥ ೩ ॥ ಶ್ರೀಃ ॥

### ೬೦. ರಾಗ ತೋಡಿ, ತ್ರಿವುಡೆತಾಳ.

ಪಕ್ಷಿವಾಹನ ಶ್ರೀವಾಮನ । ಅಂತ । ರಿಕ್ಷಾಳಕ ಪ್ರಿಯ ಕಾಯೆನ್ನ ॥ ರಕ್ಷಪನಿಭ ಮಾಯಾ । ಕಕ್ಷಾಗ್ನಿ ಹರೇ ಜಗ । ತ್ಸಾಕ್ಷಿ ನಂಬಿದೆನೆನ್ನ

ಪೇಕ್ಷೆ ಮಾಡಲಿ ಬೇಡ ॥ ಪಲ್ಲ ॥ ಅಂಜನಾ ಧರಾಧಾರ ಧಾಮ । ಹೇ
ನಿ । ರಂಜನ ವನಮಾಲಿ ಭೂಮ ॥ ಪುಂಜ ಸುಗುಣನೇ ಪ । ರಂ
ಜ್ಯೋತಿ ಹರೇ ಕೃತಾ । ಅಂಜಲಿ ಪುಟದಿಂದ ॥ ಲಂಜಿ ಬೇಡುವೆ ಬಾಲ
ಭಂಜನಾನುಜ ವಿತತ ತ್ರಿಜಗ । ಮಂಜುಳಾಂಗನೆ ವೀತ ಭೂಮುಖ ।
ಕಂಜನಾಭನೆ ತರುಣಿ ಶಿವನೃಪ । ಕುಂಜರ ವರದ ಕರವ ಪಿಡಿಯೊ ॥
॥ ೧ ॥ ಪಾಠೀನಕಮಠ ವರಾಹ । ನೀಚ । ಹಾಟಕಾರಿ ವಟು ಭೂಭುಜ
ಹಾ ॥ ಖೇಟಹಾ ಬುದ್ಧ ಕಲ್ಕಿ । ಘೋಟಕಾನನ ವಿಶ್ವ । ನಾಟಕ ಭೈಷ್ಮಿ
ಮುಖವ । ಧೂಟಿ......ಯುರೊಲ್ಲಭ ॥ ಕೋಟಭಾಸ್ಕರತೇಜ ನಿನ್ನಯ ।
ಆಟ ತಿಳಿಯಲು ಕೋಕನದ ಶುಭ । ಪೀಠ ಲಕುಮಿ ಅಶಕ್ತರಹರು ಕಿ ।
ರೀಟಸಖ ನಿನ್ನವರೊಳಗಿಡೋ ॥ ೨ ॥ ಶಂತನುವಿನ ವಂಶ । ರಕ್ಷ ।
ಮಾತುಳಾಂತಕ ಜಲಜದಲಾಕ್ಷ । ಮಂಥಾರಿ ಶಿಶುಪಾಲ । ದಂತವಕ್ರ
ಮುರಾದಿ ಹಂತಾ ದಾನವರ ನಿ । ಕೃಂತನಾ ಹಿಮದಾಹಾ । ನಂತಧುಸಿ
ಪಿತ ವೇದವೇದ್ಯ ಅ । ನಂತ ಮಹಿಮನೆ ಅತ್ರಿಸುತ ನಿ । ಶ್ಚಿಂತ ಶ್ರೀ
ಪ್ರಾಣೇಶ ವಿಠಲ ದು । ರಂತ ಶಕ್ತಿ ಭವಾಬ್ಧಿ ಘಟಜ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೬೧. ರಾಗ ಸಾರಂಗ, ತ್ರಿಪುಟತಾಳ.

ವೆಂಕಟಾಚಲ ವಾಸ । ವಂದಿಪೆನೊ ತವ ಪದ । ಪಂಕಜವ ನಿರ್ದೋ
ಷ । ವಾರಾಶಿಜ ದ್ರುಹಿಣ । ಶಂಕರಪ್ರಮುಖ ಪೋಷ । ಶ್ರೀ ಶ್ರೀನಿವಾಸ ॥
ವೆಂಕಟ ಗದ ಸುದರುಶನ ವಿಜಯ । ಅಂಕಿತನೆ ಗಾಂಗೇಯ ಚೈಲ ತಾ ॥
ಳಾಂಕನನುಜ ಪಾಲಿಪುದು ಯನ್ನ ಮೀ । ನಾಂಕ ಜನಕ ಶ । ಶಾಂಕ
ಭಾಸ ॥ ಪಲ್ಲ ॥ ಸ್ವಾಮಿ ಹೇ ನಿರಪೇಕ್ಷ । ಝುಷಕೂರ್ಮ ವರಾಹ ।
ಹೇಮಕಶಿಪು ಶಿಕ್ಷ । ವಟು ಭೃಗುಕುಲೋದ್ಭವ । ರಾಮ ಪಾಂಡವ
ಪಕ್ಷ । ತ್ರಿಪುರಾರಿ ಕಲ್ಕಿ । ಭೀಮ ವಂದಿತ ತ್ರ್ಯಕ್ಷ । ಸಖ ವ್ರತತಿಜಾಕ್ಷ ॥
ಕಾಮಿತಪ್ರದ ಕೈರವದಳ । ಶ್ಯಾಮ ಸುಂದರ ಕೋಟಿಮಾರ ಸು ।
ಧಾಮ ಪ್ರಿಯ ಭಯವಿಪಿನ ವಹ್ನಿ ಸು । ತ್ರಾಮನಂದನ ಪ್ರಾಣರಕ್ಷಕ ॥
ಭೂಮಿಯೊಳು ದುಷ್ಟಳರಿಪು ಸಾಲ । ಗ್ರಾಮ ಮಂದಿರ ಲಕುಮಿ

ಮನೋಹರ । ಸಾಮಜೇಂದ್ರನ ಪೊರದ ಸಹಸ್ರ। ನಾಮ ಕಾಳಿಮ ದಾಹ ದೇವ ತ್ರ । ಯಾಮಯ ತೃಣ ಕಾಷ್ಠದಿ ವ್ಯಾಪ್ರುತ । ಚಾಮೀಕರಭೂ ಷಣ ಶೋಭಿತ । ಹೇಮಾಚಲ ಮಂದಿರ ಮುನಿಗಣ । ಸ್ತೋಮಾರ್ಚಿತ ಕರುಣಿಸು ತ್ವರಿಯಾ ॥ ೧ ॥ ನೀರಚರ ನಗಧರ । ಕಿಟಿ ನೃಹರಿ ವಾಮನ। ಧಾರುಣಿಪ ಸಂಹಾರ । ಕೋದಂಡಕರ ಸ । ತ್ಯಾರಮಣ ಅಂಬರ ವರ್ಜಿ ತ ತುರಂಗಮ । ವೇರಿ ಕುಂಭಿನಿ ಭಾರ । ಇಳುಹಿದ ವುದಾರ । ಪರಾ ಶರ ಸುತ ಕಪಿಲರೂಪಿ ಸ । ವಿಾರ ವಂದ್ಯಾ । ನಸೂಯ ದೇವಿ ಕು । ಮಾರ ಪುಷ್ಕರಕೇಶನನುಜ ಮಂ । ದಾರ ನತಜನ ವಿಶ್ವಧರಣ ಶ । ರೀರ ವ್ಯೋಮಸರಿತ್ಪಿತನಘ ತು । ಷಾರಗಣ......ದುವರೊ ನಿನ್ನಯಾ । ಪಾರ ಮಹಿಮೆಯ ತಿಳಿಯಲಾರರು ॥ ನೀರಜಾಕ್ಷಜ ಪಿತಾ ಮಾತಾಮಹನು ಮಿ । ಕ್ಕರಿಂದೊಶ ಅಗ್ನಿಭಯ ನಿವಾರಣ । ಸಾರಿಗರದು ಪೂರೈಸಭಿಲಾ ಷೆಯ । ಘೋರಿಸುತಿಹ ತಾಪತ್ರಯ ಬಿಡಿಸೊ ರ । ಮಾರಮಣನೇ ಪ್ರಣ ತಾರ್ತಿ ಪರಿಹರ ॥ ೨ ॥ ವೇದವುದ್ಧರ ಕೂರ್ಮ । ಈ ಕ್ಷಿತಿಯ ಮಾಯದ । ಲೊಯ್ದ ದುರ್ಮತಿ ಭರ್ಮ । ಲೋಚನ ಹಾ ತರಳ ಪ್ರ । ಹ್ಲಾದ ವರದ ಸುಕರ್ಮ । ಸ್ಥಿತಮಾತ್ರ ಹಿಂಸಕ । ನಾದನಿಶಸುಶರ್ಮ । ಪ್ರಮು ಖರನ ವರ್ಮ ॥ ಭೇದಿ ಸೀಳಿದ ಭೈಷ್ಮಿವಲ್ಲಭ । ಶ್ರೀದಬುದ್ಧ ಖಳಕುಲ ಭಂಜನ । ಬಾದರಾಯಣ ನಿಗಮವೇದ್ಯನೆ । ಮೋದಮಯ ಪ್ರಾಣೇಶ ವಿಠ್ಠಲ ॥ ಕಾದುಕೊ ನಿನ್ನವರನು ಯಂ । ದಾದಿ ಮಧ್ಯವಿದೂರ ಯೆನ್ನ ವಿ । ಷಾದ ಗುಣಗಳೆಣಿಸದೆ ಕುಬುಜೆಗೆ । ಮೋದ ತೋರಿದ ದೀನ ಬಂಧೂ ॥ ಶ್ರೀಧರ ಕೌಸ್ತುಭ ವಕ್ಷಸ್ಥಳ । ದ್ವಾದಶವಪು ಸನ್ನಿಭ ನಿನ್ನಯ । ಕ್ರೋಧಿಗಳೊಳು ಸ್ನೇಹವ ಪುನರಪಿ । ಮೇದಿನಿಯೊಳು ಜನ್ಮವ ಕೊಡದಿರು ॥ ೩ ॥ ಶ್ರೀಃ ॥

೬೨. ರಾಗ ಸಾರಂಗ, ತ್ರಿವುಡೆತಾಳ.

ಶರಣು ಪೊಕ್ಕೆನೊ ನಿನ್ನ ಜಾತರೂಪಾಂಗದ ವರದ ಕೈಪಿಡಿ ಯೆನ್ನ । ಪರಮೇಷ್ಟಿ ವಂದಿತ ಚರಣ ಸುರಶಿರೋ ರನ್ನ ಸುಖ ಜ್ಞಾನಪೂರ್ಣ ॥

ಉರಗ ಪರ್ವತನಿಲಯ ಭಕ್ತರ ಕರದು ವರಗಳ ಕೊಡುವ ವೆಂಕಟ: ಗರುಡವಾಹನ ಲಕ್ಷ್ಮೀಪತಿ ಮಂದರ ಧರಾಧರಧಾರ ದೇವ । ಶರಣು ॥ ॥ ಪಲ್ಲ ॥ ಕಾಮಿತಾರ್ಥದ ರಂಗ ಮಧ್ವಮುನಿ ಪೂಜಿತ । ರಾಮ ಭವ ಭಯ ಭಂಗ ದಶರೂಪಿ ಶರಧಿಜ । ಪ್ರೇಮ ಸುಜನರ ಸಂಗ ಕೊಡು ಯೆಂದಿಗೆಂದಿಗೂ । ತಾಮಸರಿಪು ರಂಗ ಅಂಕಸಖ ಸಾಂಗ । ಹೇಮ ಗರ್ಭನ ನಾಭಿಕಮಲದಿ । ನೀ ಮುದದಿ ಪಡೆದೀ ಚರಾಚರ । ನೇಮ ದಿಂದಲಿ ಸೃಜಿಸ ಪೇಳಿದ । ಸ್ವಾಮಿ ನೀ ಸರ್ವರೊಳು ವ್ಯಾಪಿಸಿ ॥ ಭೂಮಿ ಯೊಳು ಸಾತ್ವಿಕರು ರಾಜಸ । ತಾಮಸರ ನಿರ್ಮಾಣ ಮಾಡಿಸುದಾಮ ಸಖ ಗತಿದುರ್ಗತಿಗಳನು । ಈ ಮರಳು ಜವನರಿಗೀವುತ ॥ ನೀ ಮಡಿವಂ ತನು ಯೆನಿಸುವೆಲಾ ಸು । ತ್ರಾಮಾವರಜ ಬಲು ಸೋಜಿಗವೊ ಇದು । ಯೋಮನದಿ ಪದ ನೀ ಮಾಡಿದೆ ಮರಿಯಾದ್ಯೊ ಮರಳೊಬ್ಬರು ಹೇ ಳುವರುಂಟೆ ॥ ೧ ॥ ಪುಂಡರೀಕದಳಾಕ್ಷ ತನ್ಮಾತ್ರ ದೂರ । ಪಾಂಡು ರಂಗಾಘಕಕ್ಷ ಗಾಂಗೇಯರೇತಾ । ಪಾಂಡುನಂದನ ಪಕ್ಷದರ ಚಕ್ರ ಪಾಣಿ । ಪುಂಡ ಕೌರವ ಶಿಕ್ಷ ಶ್ರೀವತ್ಸವಕ್ಷಾ ॥ ಕುಂಡಲೀಶಯನ ವಿದುರಸಖ ಮಾ । ತಾರ್ಗಂಡ ಕೋಟಿ ಪ್ರಕಾಶ ಹರಿ ಉ । ದ್ದಂಡ ಮಹಿ ಮನೆ ಕಂಡ ಕಂಡವ । ರಂಡಲಿದು ಯೆನ್ನಯ ಶರೀರವು । ಬೆಂಡು ಆಯಿತು ಕಾಣೆ ಕಾಯ್ವರಾ । ಜಾಂಡೋದರ ನಿನ್ನುಳಿದು ಪೂರ್ವರ ॥ ದಂಡಿಸದೆ ಬರುತಿಪ್ಪ ಜನ್ಮವ । ಖಂಡಿಸಿ ನಿನ್ನಾಮ ಉಣಿಸೊ ॥ ಮಂ ಡೋದರಿ ವಲ್ಲಭನಾಶಕ ಶ್ರೀ । ಚಂಡಮುರಾರಿ ಖಳಕುಲಾಂತಕ । ದಂ ಡಾತ್ಮಜ ರಕ್ಷಕ ಹರಿ ಮೇ । ಷಾಂಡಜ ಸಂಹರ ಕರುಣಾದಿ ನೋಡೊ ॥ ॥ ೨ ॥ ಧರಣಿಯೊಳಗಿನ ರಾಯರೆಂಬುವದು ವೇಷಕ । ಪುರುಷನಿಗೆ ಬಹುದ್ರವ್ಯ ಕೊಟ್ಟೆನ್ನು ವೇಷವ । ತರಲಿ ಗೊಡದೆಲೊ ದೇಹಾ ಬಹು ತಾಳಿ ಬಂದೆನೊ । ಕರುಣವಿಲ್ಲವೇ ಜೀಯ ಸಾಕೆನ್ನೊ ಮಾಯಾ ॥ ವರನೆ ಆಟವು ಮಾತ್ರ ಹಣಕೊಡ । ದಿರೊ ನಾಬಲ್ಲೆನೊ ಕುಡಿದಸ್ತನ ಪಯ । ಶರಧಿ ದ್ವಿಗುಣವು ಯೆನ್ನ ಅಸ್ಥಿಯು । ಗಿರಿಗದ್ರಿಗೆ ದ್ವಿಗುಣ ವಾಗಿಹವೊ ಇಂತೀ । ಕರಕರೆಯು ನಾನಾರಿಗುಸುರಲಿ । ಸುರಪತಿ ಪ್ರಾಣೇಶ

ವಿಠ್ಠಲ । ತರುಣಿ ಸುತಧನ ಪಶುಯೆಂಬುವ ಈ । ಪರಮ ಮೋಹದ ಮಡುವು ಬಿದ್ದು ॥ ಹರಿ ನಿನ್ನೊಂದಿನ ಸ್ಮರಿಸಿಲ್ಲವೊ ನೀ । ನರಿಯೆ ನಿಂತ್ಯ ಲ್ಲವೊ ಪರತರ ಕರಿ । ವರದ ಮೇಲೇನರಿದದು ಮಾಡುವ । ದರಿಕರಿ ಷಂಡ ಮೃಗೇಂದ್ರ ಪರಾಕೂ ॥ ೩ ॥ ಶ್ರೀಃ ॥

೬೩. ರಾಗ ಪೂರ್ವಿ. ಆದಿತಾಳ.

ಗಂಗಾಪಿತ ವೆಂಕಟಪರ್ವತ ನಿಲಯ । ಕೌಸಲ್ಯೆ ತನಯ । ಮಂಗಳೆ ವಲ್ಲಭನೆಕರಕರೆಯ । ಪರಿಹರಿಪುದು ತ್ವರಿಯಾ । ಅಂಗಜ ಜನಕನೇ । ಸಂಗರಹಿತ ಸ । ತ್ಸಂಗ ಕೃಪಾಬ್ಧಿ ವಿ । ಹಂಗವಾಹನನೇ । ಗಂಗಾ ॥ ॥ ಪಲ್ಲ ॥ ಸ್ವಾಮಿ ಲಾಲಿಸು ಯೆನ್ನಯ ಮನದುಸರಾ । ನೀನಲ್ಲದಿತರರಾ । ಭೂಮಿಯೊಳ್ಕಾಣೆನೊ ಉದ್ಧರಿಸುವರ । ನವನೀತ ಚೋರ । ಸಾಮಜ ದ್ರೌಪದಿ । ಆ ಮುಚುಕುಂದ ಸು । ದಾಮರ ಪೊರೆದ ಶ್ರೀಧಾಮ ಮಹಾ ತ್ಮಾ ॥ ೧ ॥ ವಾಸುಕೀಶಯನ ದಯ ಸಂಪನ್ನ । ನಾರಾಯಣ ನಿನ್ನ । ದಾಸರೊಳಗಾಡಿಸೋ । ಸದ್ಗುಣ ಪೂರ್ಣ ಸರ್ವರಿಗೆ ಪ್ರಸನ್ನ । ಈ ಸಲ ಕೆ ನೀ । ಸಂಸಾರ ಶರಧಿ । ಕೈ ಸೋಕಿತೆಲೊ ಪ । ರಾಶರ ತನಯ ॥ ೨ ॥ ನಿತ್ಯ ಆನಂದ ನಿಗಮೋದ್ಧಾರ । ಪೂತಸಿ ಸಂಹಾರ । ಮೃತ್ಯುಂಜಯ ಸಖ ಅರಿದರ ಗದಾಧರ । ಸುಖಪಾರಾವಾರ ॥ ಭೃತ್ಯವತ್ಸಲ ಸು । ರೋ ತ್ತಮ ಪಾರ್ಥನ । ತೆತ್ತಿಗನಾದಿ ಸು । ಸತ್ಯ ಸಂಕಲ್ಪ ॥ ೩ ॥ ಮಂದರಾ ಚಲ ಧರಿಸಿದ ಗೋ । ವಿಂದ ಶ್ರೀಯಶೋದೆ ನಂದ । ನಂದನ ಶ್ರೀಕೇಶವ ಮು । ಕುಂದ ವಾಮನ ಸುಖಸಾಂದ್ರ ॥ ತಂದೆ ಸಲಹೊ ನಿನ್ನ । ಬಂ ಧಕ ಶಕುತಿಯ । ಲಿಂದ ದಣಿಸದೇ ಅ । ರಿಂದಮಪ್ರಭುವೇ ॥ ೪ ॥ ಅಂತರಂಗವ ಬಲ್ಲ ಮಧುದ್ವೇಷೀ । ಯೆನ್ನಯ ಮನದಾಶೀ । ಅಂತೂ ಪೂರ್ತಿಸಿ ದುಷ್ಕರ್ಮದ ರಾಶಿ । ಉಳಿಸದೇ ಪರಿಹರಿಸೀ । ಸಂತತ ಹೃದ ಯದಿ । ನಿಂತು ಪೊಳೆವದೊ ಅ । ನಂತ ಮುರಾಂತಕ । ಚಿಂತೆ ರಹಿ ತನೇ ॥ ೫ ॥ ಶಕ್ರಾವರಜ ಪೂಜಿತ ಬಲವಂತ । ರುಗ್ಮಿಣಿಪತಿ ದಂತ । ನಕ್ರಾರಿ ಬಾಧಿಸದಂತೆ ಕೃತಾಂತ । ಮಾಳ್ಪದು ಕೆಡದಂಥ । ಸುಕೃತ

ಪಿಡಿಸೊ ತ್ರಿ । ವಿಕ್ರಮ ಮೂರುತಿ । ಶುಕ್ರ ಯುಕ್ತಿಹರ । ಅಕ್ರೂರ ವರದ ॥ ೬ ॥ ಕಂಕಾನುಜಮಂದಿರ ಪ್ರಾಣೇಶವಿಠಲ । ಗೋಕುಲ ಗೋಪಾಲ । ಪಂಕಜಾಸನ ಜನಕ ಶಕಟಕಾಲ । ಜಾಂಬವತೀ ಲೋಲ ॥ ಶಂಕರಾದ್ಯಮರ ಕ । ಳಂಕಣಿಸದ ಗರು । ಡಾಂಕ ಉರಗ ಪರಿ । ಯಂಕ ಸುಖಾತ್ಮ ॥ ೭ ॥ ಶ್ರೀಃ ॥

## ೬೪. ರಾಗ ಭೈರವಿ, ಝಂಪೆತಾಳ.

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ಪಲ್ಲ ॥ ಪುಣ್ಯಾಲಯ ನಿಲಯಗೆ ವಸುಧೇಂದ್ರ ಕುವರನಿಗೆ । ಸನ್ನುತ ಜನ ಸುರತರು ರವಿತೇಜಗೆ ॥ ಪನ್ನಂಗ ಶಯನನ ಪದ ವನಜ ಭೃಂಗಗೇ । ಅನ್ಯಮತ ಜೀಮೂತ ಪವಮಾನಗೇ ॥ ೧ ॥ ಗುರು ಮಧ್ವಮುನಿ ಮತ ಜಲಧಿ ಪೂರ್ಣ ಚಂದ್ರಮಗೆ । ಧರಣಿ ಸುರವಂದ್ಯನಿಗೆ ಸ್ವರ್ಣಾಭಗೆ ॥ ದುರುಮತಿಯ ಕಳೆದು ಸುಜ್ಞಾನ ಪ್ರೇರಿಸುವನಿಗೆ । ಹರಿಯೆ ಪರನೆಂದು ಮೆರಿಸಿದ ಮುನಿಪಗೆ ॥ ॥ ೨ ॥ ಪ್ರಾಣೇಶವಿಠಲನ್ನ ತನ್ನನವರತ ಮನದಿ । ಕಾಣಿಸಿ ಕೊಡುವ ಕೃಪಾಸಾಗರನಿಗೆ ॥ ವಿಮಾನಾಂಕಜಿತಗೆ ಅಗಣಿತ ಚರಿತೆ ತೋರ್ದವಗೆ । ಕ್ಷೋಣಿಯೊಳಗಪ್ರತಿವದಾನ್ಯಾರ್ಯಗೆ ॥ ೩ ॥ ಶ್ರೀಃ ॥

## ೬೫. ರಾಗ ಕಾಂಬೋಧಿ, ಆದಿತಾಳ.

ಗುರು ವರದೇಂದ್ರ ದಯಾಸಿಧೇ । ಶರಣಾಗತವತ್ಸಲ ಈಶ । ಚರಣ ಕಮಲ ಷಟ್ಪದ ಪಾಲಿಸು ಕಾಷಾಯ ವಸನ ಭೂಷ ॥ ಗುರುವರ ॥ ಪಲ್ಲ ॥ ದುರ್ಮತಭುಜಗ ಕು । ಘರ್ಮ ವಿನಾಯಕ । ಕರ್ಮಾಬದ್ಧ ವ್ರತ । ಶರ್ಮ ಶ್ರೀಧರಪ್ರಿಯ । ಧರ್ಮಾಸಕ್ತನೆ । ನಿರ್ಮಲ ಶುಭಚರಿತ । ಭರ್ಮ ಸಮಾಂಗ ಅ । ಧರ್ಮ ಶಿಕ್ಷ ಕರಿ ಚರ್ಮಾಂಬರ ಪ್ರೀತ । ಕಿರ್ಮೀರಾರಿ ಸುಶರ್ಮ ತೀರ್ಥಸಖ । ಕರ್ಮಂದಿಪನಾಥ ॥ ೧ ॥ ಶ್ರೀಮನೋರಮ ಸುತ್ರಿ । ಧಾಮ ದೇವ ಶ್ರೀ । ರಾಮ ಪದಾಸಕ್ತ । ಕಾಮಿತ ಫಲದ ಧ । ರಾಮರ ವಂದಿತ । ಸ್ವಾಮಿ ನಮಿಪೆ ಭಕ್ತ ॥ ಶ್ರೀಮಂದಾರ ಅ । ನಾಮಯ ಸದ್ಗುಣ । ಧಾಮನೆ ಸುವಿರಕ್ತ । ಪಾಮರ ದೂರ ಲ । ಲಾಮವ

ಪಾನ್ಯ ಮ। ಹಾಮಹಿಮನೆ ಶಕ್ತ ॥ ೨ ॥ ಮಾನಿ ಪೂಜ್ಯ ಸು। ಜ್ಞಾನಿ ಧೀರ ಸ। ಧ್ಯಾನುಚಂದ್ರ ಭಾಸ। ದೀನ ಪೋಷಕ ನಿ। ಜಾನುಗ ಪಾಲಕ। ಕ್ಷೋಣಿಪ ನಿರ್ದೋಷ। ಸಾನುರಾಗದಲಿ। ಪೋಣಿಸು ಸನ್ಮತಿ। ಮೌನಿ ಕುಲಾಧೀಶ। ನೀನಲ್ಲದೆ ಶ್ರೀ। ಪ್ರಾಣೇಶವಿಠ್ಠಲ। ತಾನೊಲಿಯನು ಲೇಶ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೬. ರಾಗ ಭೈರವಿ, ಅಟತಾಳ.

ಶರಣು ನಿತ್ಯಾನಂದ ಸದ್ಗುಣಸಾಂದ್ರ। ನಿನ್ನ। ಚರಣಕಮಲಕೆ ಶ್ರೀವ ರದೇಂದ್ರ ॥ ಪಲ್ಲ ॥ ನಿನ್ನನಂಬಿದ ದಾಸರವನಿಯೊಳು। ಇಂಥ। ಬನ್ನಬಡಿ ಸುವದುಚಿತವೇ ದಯಾಳು ॥ ಅನ್ಯರುಂಟೇ ನೀನಲ್ಲದುದ್ಧರಿಸಲು। ಪ್ರಾ। ಪನ್ನ ಪೋಷಕಾ ಯೆನ್ನ ಬಿನ್ನಪವ ಕೇಳು ॥ ೧ ॥ ನರರ ಪಾಡಿಸ ದೀರೊ ಯತಿರಾಯ। ಹರಿ। ಸ್ಮರಣ ಮಾಡಲು ಮನಕೊಡು ಜೀಯ ॥ ಕರಕರೆಯ ಭವದೊಳು ಒಂದೂಪಾಯ। ಕಾಣೆ। ಹರಿಸಿ ಕ್ಲೇಶವ ನೋದ ತೋರಿಸಯ್ಯ ॥ ೨ ॥ ಧರೆಗೆ ಪ್ರಸಿದ್ಧ ಪುಣ್ಯಾಲಯ ವಾಸ। ಕಾಯೋ। ನ್ನರ ನಂಬಿದವರನ್ನ ರವಿಭಾಸ। ಹರಿದಾಸರ ಕಾಡೂವ ರನ್ನಭಾಸ। ಮಾಡೊ। ಗುರು ಪ್ರಾಣೇಶವಿಠಲನ್ನ ನಿಜದಾಸ ॥ ೩ ॥

## ೬೭. ರಾಗ ಮುಸದಿಚ್ಛೆ, ವಾರ್ಧಿಕಷಟ್ಪದಿ.

ಶ್ರೀಮಧ್ವಮತವೆಂಬ ಕ್ಷೀರ ಪಾರಾವಾರ। ಸೋಮನೆನಿಸುತಿಹ। ವರ ದೇಂದ್ರ ಕರಸಂಜಾತ। ಈ ಮಹಿಯೊಳಾವಾವ ಪರಿ ಕಾಣಿಸುವ ನೋಡಿ ॥ ರಾಮಪದ ಜಲಜ ಭೃಂಗ ॥ ಪಲ್ಲ ॥ ಕುಂಡಲಿಯು ಭಾರತಿಯು ಈಶ ನೂ ಯೆಂತ ದ್ವಿಜ। ಪಂಡ ತುತಿಸುವದು ಶ್ರೀಭುವನೇಂದ್ರ ರಾಯರ। ನ್ಕಂಡು ಪದಯುಕ್ತ ಪುರುಷಾಕಾರ ಶಿಖರಹಿತ ಕೂಡದಿದು ಯೆನಲು ಪೇಳ್ವೆ ॥ ದಂಡಧರ ಯೋಗದಾರಕ್ಷ್ಯದಲಿ ಅಹಿಯಂತೆ। ಪಂಡಿತೇಶರು ವಾಗ್ಬಲದಲಿ ಭಾರತಿಯಂತೆ। ರುಂಡಮಾಲಿಯ ತೆರನ ತೋರುವರು ವೈರಾಗ್ಯದಲಿ ನಿರತ ಭಜಿಸುವರಿಗೆ ॥ ೧ ॥ ವಿಧಿಯೊ ಅರ್ಕನೊ ಇಂದ್ರನೊ

ಯೆಂಬ ತೆರದಲಿ। ಬುಧಜನಕೆ ತೋರ್ವ ನಾಲ್ಕೊಗ ಖಗ ಸಹಸ್ರಾಕ್ಷ। ಇದು ಎಂತು ಸಾಮ್ಯವೆನೆ ಸರ್ವಜನಯೋಗ್ಯತೆಯ ತಿಳಿವಂತೆ ಧಾತನಂತೆ॥ ಮದಡ ಜ್ಞಾನಾಚ್ಛಾದಿತವು ಕಳವಲ್ಲಿ ರವಿಯಂತೆ। ಪದುಮೇಶನ ಗುಣವ ವಿಚಾರಿಸಲನೇಕಾಕ್ಷ। ಚದುರನೆಂಬಗೆಯಿಂದ ಒಪ್ಪುತಿಹ ನಮ್ಮ ಗುರು ತುತಿಸುವದಕೆನ್ನ ವಶವೆ॥೨॥ ಕಡಲೊ ಸುರಧೇನೊ ಇದು ಹಂಸನೊ ಯೆಂಬಂತೆ। ಪೊಡವಿಗೆ ವಿರಾಜಿಸುವ ಉದಕ ಮಯವಾಗಿಹ। ಕಡು ಚತುಃಪಾದಿ ಅಂಡಜ ಜಂತು ಈ ಸಾಮ್ಯ ಸಲ್ಲದೆನಸಲ್ಲ ವಿವರ॥ ವಡಲಿನೊಳು ಪ್ರಾಣೇಶವಿಠಲ ಮಣಿ ಪೊಳವುತಿದೆ। ಕೊಡುವ ಬೇಡಿದ ವರ ಅಮರರಾಕಳಿನಂತೆ। ಕುಡಿವಂತೆ ಹಂಸ ಪಯಜಲಬಿಟ್ಟು ದೋಷವೆಣಿಸದೆ ಬಿನ್ನಹವ ಲಾಲಿಪಾ॥೩॥ ಶ್ರೀಃ॥

## ೬೭. ರಾಗ ರೇಗುಪ್ತಿ, ಆದಿತಾಳ.

ಕಾಯೆ ಕಾಯೆ ಇಂದಿರೇ। ತೋಯಜಾಕ್ಷಿ ವೈನತೇಯವರೂಥೆ ಈ। ಕಾಯ ನಿನ್ನದು। ನೋಯಿಸದೆನ್ನನು। ಕಾಯೆ ಕಾಯೆ॥ ಪಲ್ಲ॥ ದೊಡ್ಡಾತನರಸಿ ನೀನಮ್ಮ। ಕೈ। ವಡ್ಡಿ ಬೇಡುವೆ ನುಡಿ ಕೇಳಮ್ಮಾ॥ ಗಡ್ಡದಂತಿಹ ದೋಷ। ಕಡ್ಡಿಯಂತೊಡಿಸಲಾರೆಯಾ ಹಾ॥ ನಿನ್ನವನೆಂಬೊದರಿಯಾ ಹಾ। ಇತ್ತ ಬಾ ಯೆನಲಾರೆಯಾ ಹಾ। ಕೃತಾಂತಗೆನ್ನ ಮಾರೆಯಾ ಹಾ॥೧॥ ಬೊಮ್ಮಾದಿಗಳ ಪ್ರೇರೆವಾಕೆಂದು ಶ್ರುತಿ। ಸಮ್ಮತವಾಗಿರೆ ನೀನಿಂದು ಯೆಮ್ಮನು ನೋಡದೆ। ಸುಮ್ಮನಿರ ಬಹುದೇ ಭೂಪಣಾ ಹಾ। ಬಿಡದೆ ತ್ರಯ ಈಷಣಾ ಹಾ ಮಾಳ್ಪವು ಬಹು ಶೋಷಣಾ ಹಾ। ಬಿಡಿಸಿ ಮಾಡೆ ಪೋಷಣಾ ಹಾಹಾ॥೨॥ ಸುರಪತಿ ಪ್ರಾಣೇಶ ವಿಠ್ಠಲನ ಪದ। ಸರಸಿಜ ಪೊಂದಿಸೆ ಶ್ರೀಲಲನಾ॥ ಅರಗಿನಂತೆ ಜನನಿ। ಮರದಂತೆ ಮಕ್ಕಳು ಯೆಂಬರಾ ಹಾ। ಆರ್ಯರನುತೆ ಶಂಬರಾ ಹಾ। ರಿ ಮಾತೆ ಹಾಟಕಾಂಬರಾ ಹಾ। ಧಾರೆ ಮೆಚ್ಚಿ ಪೀತಾಂಬರಾ ಹಾಹಾ॥೩॥

## ೬೮. ರಾಗ ತೋಡಿ, ಆದಿತಾಳ.

ಕ್ಷೀರವಾರಿಧಿಸಂಭೂತೇ। ಪ್ರದ್ಯುಮ್ನ ಮಾತೇ। ಈರೇಳು ಲೋಕ ವಿಖ್ಯಾತೇ॥ ಆರಾಧಿಪೆ ತವ ಚರಣ ಕಮಲೇ। ಹೃದ್ವಾರಿಜದೊಳಗೆ

ವು । ರಾರಿಯು ತೋರೆ ॥ ಪಲ್ಲ ॥ ಘಾತಾದಿ ದಿವಿಷತ್ಪೂಜಿತೇ । ಸಲ್ಲೋಕ ದಾತೇ । ಜಾತವುಧ್ವಾಂತರಹಿತೇ । ಸೀತೆ ಸದ್ಗುಣಗಣವ್ರಾತೇ । ಭಜಕರ ಪ್ರೀತೆ । ಭೂತ ತನ್ಮಾತ್ರ ಗುಣವೀತೆ । ಪಾತಕಾರಣ್ಯಕೆ ಜಾತವೇದಸೆ ಪುರು । ಹೂತ ಪೂಜಿತೆ ರಮೇ । ಮಾತು ಮಾತಿಗೆ ನಿನ್ನ । ಪ್ರೀತಿ ರಮಣ ರಘು । ನಾಥನ ಸ್ಮರಣೆಯು । ಆತುರದಲಿ ಕೊಡೆ । ಸೀತಾಂಶುಮುಖೇ ॥ ೧ ॥ ಷಡುವಿಕಾರದೂರೆ ವ್ಯಾಪ್ತೆ । ಜ್ಞಾನಿಗಳ ಪ್ರಾಪ್ತೆ । ಬಿಡದೇ ಭಜಿಸುವರೀಗಾಪ್ತೇ । ನಡುಮನೆ ಸುತ ಸೇವೆಗೆ ತೃಪ್ತೇ । ದೋಷ ನಿರ್ಲಿಪ್ತೆ । ಕಡುದಯಾವಂತೆ ಸೂಸುಪ್ತೆ । ಪಡದು ಕಮಲ ಭವ । ಮೃಡ ಪ್ರಮುಖರವರ । ಕೊಡುವಿ ನಿರಂತರ । ಬಡವನು ನಾ ನಿ । ನ್ನೊಡಲಿಗೆ ಭಾರವೇ । ತಡೆಯದೆ ಶ್ರೀಹರಿ । ಅಡಿಗ ಳರ್ಚಿಪುದಕೆ । ದೃಢಮನ ಪಾಲಿಸು ॥ ೨ ॥ ಸಿಂಧೂರಗಮನೆ ಅಹಿ ವೇಣಿ । ಲೋಕೈಕ ತ್ರಾಣಿ । ಮಂದಹಾಸಾಸ್ಯೆ ಕಲ್ಯಾಣೀ । ನಿಂದಿ ತಜನ ಸೂದನೀ । ಸರಸಿಜ ಪಾಣಿ । ಇಂದಿರಾದೇವಿ ಶುಭವಾಣಿ ॥ ನೊಂ ದೆನೆ ಜನ್ಮಾದಿ । ಬಿಂದು ಸುಖವನ್ನ । ನೊಂದರಿಯೆನೆ ಅರ । ವಿಂದ ಸದನೆ ವಾರಿ । ಸಿಂದುಭಯುವ ಪ್ರಾಣೇಶವಿಠ್ಠಲನ । ಚಂದದಿತುತಿಪ ಆನಂದವ ಬಡಿಸೇ ॥ ೩ ॥ ಶ್ರೀಃ ॥

## ೭೦. ರಾಗ ಪೂರ್ವಿ. ಏಕತಾಳ.

ಕಾಯೆ ನಿನ್ನ ಪದ । ತೋಯಜಕೆರಗುವೆ । ಮಾಯಾ ದೇವಿ ಹರಿ । ಕಾಯನಿವಾಸೇ । ಕಾಯೆ ಕಾಯೆ ॥ ಪಲ್ಲ ॥ ಬುದ್ಧಿಯು ಪ್ರೇರಿಸೆ । ಪ್ರ ದ್ಯುಮ್ನನ ಸತಿ ॥ ಕರ್ದಮಜಾಲಯೆ ಕಾಯೆ ಕಾಯೆ ॥ ೧ ॥ ಇಂ ಗಡಲಾತ್ಮಜೆ । ಅಂಗನೆ ಕುಲಮಣಿ ॥ ರಂಗನ ಪದಕಂಜ । ಭೃಂಗೆ ಕರುಣದೀ । ಕಾಯೆ ಕಾಯೆ ॥ ೨ ॥ ಪ್ರಾಣೇಶವಿಠಲನ । ಮಾನಿನಿ ಯೆನ್ನಯ । ಹೀನತೆ ಯೆಣಿಸದೆ । ಪೋಣಿಸು ಮತಿಯಾ । ಕಾಯೆ ಕಾಯೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೧. ರಾಗ ನಾಟಿ, ಝಂಪೆತಾಳ.

ಪಾಹಿ ಸರಸ್ವತಿ ಸುಗಾಯತ್ರಿ ಶ್ರೀಸಾವಿತ್ರಿ । ಮಹಾ ದುರಿತಾದ್ರಿಪವಿ ದೀನ ಸುರಧರಿಣೀ ॥ ಪಲ್ಲ ॥ ಶಿಷ್ಟಜನ ಪಾಲಿಪಳೆ ದುಷ್ಟಜನ ದೂರಳೆ । ಶ್ರೀವೃಷಪತಿ ಸೇವೆಯೊಳಗಿಟ್ಟು ದುರುಳ ॥ ಬಿಟ್ಟು ಹಿಡಿಸದಲೆ ದಯವಿಟ್ಟು ಪಿಡಿವದು ಕೈಯ್ಯ । ಕಷ್ಟನಾಶನ ಮಾಡೆ ಕೊಟ್ಟು ಸುಖ ಪೂಜ್ಯೆ ॥ ೧ ॥ ಮದನಸತಿ ಕೋಟಿಲಾವಣ್ಯೆ ಗುಣ ಸಂಪನ್ನೆ । ಸುದತಿ ವೃಂದ ಶಿರೋಮಣಿ ಕರುಣಾರ್ಣವೆ ॥ ಮಧುಜಿತ್ಪ್ರಿಯನ ರಾಣಿ ವಾಣಿ ವೀಣಾಪಾಣಿ । ಹೃದಯದೊಳು ಕಮಲನಾಭನ ನಿರತ ತೋರೆ ॥ ೨ ॥ ಈಶಾದಿ ಸುಮನಸಾರ್ಚಿತ ಪಾದ ಸರಸಿರುಹೇ । ಶ್ರೀಶಪುರಾನಂದೆ ಸುಗುಣೆ ಶ್ರೀಪ್ರಾ । ಣೇಶವಿಠ್ಠಲನ ಕೊಂಡಾಡುವರೊಳಗೆ ಸ್ನೇಹ । ಹ್ರಾಸವಾಗದೆ ಈಯೆ ಇಭರಾಜಗಮನೇ ॥ ೩ ॥ ಶ್ರೀಃ ॥

## ೨೨. ರಾಗ ಭೈರವಿ, ಅಟತಾಳ.

ದಾಸರ ನೋಡಿರೋ ವಿಜಯದಾಸರ ಪಾಡಿರೋ ॥ ಪಲ್ಲ ॥ ಆಸರ ಪಿಡಿದಿದ್ದ ದಾಸರ ಸಲಹುವ । ಲೇಸು ಕೊಡುವ ಸಂತೋಷ ಪಡುವ ॥ ॥ ಅನುಪಲ್ಲ ॥ ಭಗೀರಥರಾಯನ ಅಂದದಿ ಜಾಹ್ನವಿ ತಂದ ಬಲು ಆನಂದ । ವಿಗಡವಾಗಿ ಪೋದ ವಂಶೋದ್ಧಾರಕ ನೀತ ಅತಿ ಪ್ರಖ್ಯಾತ ॥ ಭಗವಂತನಲೀಲೆ ಪರಿಪರಿಯಿಂದಲಿ ತಿಳಿದು ಮನದಲಿ ವಲಿದು । ತೆಗದಿಡಲರಿಯದ ಸುಬೋಧಕವನವ ನುಡಿದಾ ಮಾಯಿಗಳ ಬಡಿದಾ ॥ ॥ ೧ ॥ ಪುರಂದರ ದಾಸರತಿ ಕರುಣವಚನವನು ತೊಟ್ಟಾ ಜಗದೊಳು ದಿಟ್ಟಾ । ಗುರುಭಕುತಿಯ ಮಾಡುವಲ್ಲಿ ಯೆಣೆಗಾಣೆ ಹರಿ ಪಾದವಾಣೆ ॥ ಭರಿತವಾದಜ್ಞಾನ ಮೃಗರಾಜನಂದದಿ ಚರಿತಾ ಚರಿಸಿದ ತ್ವರಿತಾ । ಪರಮ ಗುರುಗಳಿಂದ ಮರುತದೇವನ ಮತವಿಡಿದಾ ಸತ್ಯವ ನುಡಿದಾ ॥ ॥ ೨ ॥ ಅವನಿಯ ಮೇಲಿನ ಸಂಚಾರ ಪರೋಪಕಾರ ಗುಣಸಾಗರಾ । ಕವಿಗಳ ಕಾಣುತ ಅವರಿಗೆ ಬಲು ವುಪಚರಿಸಿ ಬಲು ಆದರಿಸಿ ॥ ಖವ ಖವ ನಗುತಲಿ ದೀನ ಜನಂಗಳ ನೋಡಿ ಸರ್ವರ ಕೂಡಿ । ನವನವ ಮೋಹನ

ಹರಿನಾಮಾಮೃತ ಉಂಡ ಹರಿಪಾದ ಕಂಡಾ ॥ ೩ ॥ ಕಾಮಕ್ರೋಧ
ಗಳು ಲವಮಾತ್ರಾದರು ಧರಿಸಾ ಕುಜನರ ಬೆರಸಾ । ಹೇಮ ಮೊದ
ಲಾದ ಕಾಂಕ್ಷೆಯನೆಲ್ಲವ ತೊರೆದಾ ಶರಣಗೆ ವರದಾ ॥ ಸೋಮನಂದದಿ
ಬಳಿಪಿಡಿದವರ ಮನಸಿಗೆ ತೋರಿ ಸರ್ವರ ಮಿಾರಿ । ಮಾಮನೋಹರನ
ಸ್ವತಂತ್ರ ಅನುಭವವೆಲ್ಲ ಈತನೆ ಬಲ್ಲ ॥ ೪ ॥ ಸುರನದಿ ಮಿಾಯಲು
ಇವರ ಸಂಗದ ಫಲವೆಲ್ಲ ಬಿಟ್ಟವ ಖುಲ್ಲ । ಗರಹೊಡದ ಉನ್ನಂತ ಇವ
ರಿಗೆ ನುಡಿದ ಮಾನವನು ಅವ ದಾನವನು ॥ ಅರಸುಜನರೆಲ್ಲ ಇತರ
ವ್ಯಾಕುಲವೆಲ್ಲ ತಡಿದು ವಂದಿಸಿ ನುಡಿಪು । ಶಿರಿ ಹಯವದನವಿಠಲನು
ಮುಕ್ತಿಯನೀವ ಅವನ ಕಾವ ॥ ೫ ॥ ಶ್ರೀಃ ॥

## ೭೩. ರಾಗ ಯದುಕುಲಕಾಂಬೋಧಿ, ಆದಿತಾಳ.

ಮರವರಿ ಯೆನ್ನ ರಾಘವೇಂದ್ರ ಗುರುವೆ ಪ್ರಸನ್ನ ॥ ಪಲ್ಲ ॥ ಕರದು
ಕಾಮಿತಗಳ ಗರವೆ ನಾ ನಿನಗೆಂದು ॥ ಅನುಪಲ್ಲ ॥ ದಾರಿಯ ತಪ್ಪಿ
ಪೋಗುವ ಧೀರ ಪೋರನ್ನ । ದಾರಿಯ ಐದಿಸಿನ್ನು ಪುರವನ್ನು ತೋರಿಸಿ ।
ಮಾರಿನ ಒಳಗೆ ವಿದೂರ ನೋಡುವರೆ ದೋಷಗಳ ವಿಚಾರ ಮಾಡುವರೆ ।
ಧೀರರು ಆವ ಪರಿಯಲಾತನ ಪಾರಗಾಣಿಪರಲ್ಲದೆ ॥ ೧ ॥ ಹಸಿದು ಪರರ
ಕೆಲದಲ್ಲಿದ್ದ ದ್ವಿಜವರ್ಯ । ಶಿಶುವನ್ನ ನೋಡಿ ದಯದಿಂದ ಕರತಂದು
ಹಸಿದ್ಯಾಕೋ ಯೆಂದು ಪಾಕವ ಮಾಡಿ ॥ ಹಸನಾಗಿ ತಂದು ಬಡಿಸುವ
ಅವಸರದಿ ನಿಂದು ಎನ್ನಯ ದೋಷ । ಪಸರಿಸಿ ಉಣಿಸದ ಜನರುಂಟೆ
ಜಗದೊಳು ॥ ೨ ॥ ಜಲಪಾನಾತುರನಾಗಿ ಜಲವ ಕೇಳದ ವಿಪ್ರ । ಕುಳಿ
ತಿರುವನ ನೋಡಿ ದಯದಿಂದ ಕರತಂದು ಸುರನದಿ । ಜಲವೀವೆನೆಂದು
ಬೇಗದಿಂದ ॥ ಕಲಶದಿಂದಲಿ ತಂದು ಬಾರೆಲೊ ಬಲು । ಆಲಸವ್ಯಾತಕೆ
ಯೆಂದು ನಿನ್ನಯ ವಂಶ । ತೊಳಿಯ ಕೊಡುವೆನೆಂದು ತಡವ ಮಾಡು
ವರೆ ॥ ೩ ॥ ಸುಶರೀರತನವನ್ನು ಮನದಲ್ಲಿ ಬಯಸದ । ಉಸುರಾದ
ಮುನಿತನಯನ ಈಗಲೆ ಕಂಡು ತನಗಾಗಿ ॥ ಕುಶಲವನ್ನು ಪೇಳಿ ದೇವತಾ
ವೈದ್ಯ ಅಸಮಸಾಹಸರೆಂಥೇಳಿ ಆವಗೆ ದಿವ್ಯ । ರಸವನ್ನು ಹೇಳಿ

ನಿನ್ನಲ್ಲಿದ್ದಕಿಸರು ಪೋದರೆ ಕೊಡುವೆನೆಂದು ನಿಲುವರೆ ॥ ೪ ॥ ಅರ್ತಿಯು ಭಕುತನ್ನ ನಾನಿನ್ನ ದಿವ್ಯ । ಕೀರ್ತಿಯನುಳುಹಿಕೋ ವಾಸುದೇವವಿಠ ಲನ್ನ ॥ ಮೂರ್ತಿಯ ಭಜಕ ಭಕ್ತರಾಭೀಷ್ಟ । ಸ್ಫೂರ್ತಿಯು ಉಳ್ಳತನಕ ಪಾಪದ ಲೇಶ । ವಾರ್ತೆಯೆ ಯೆನಗಿಲ್ಲ ಯೆಂದು ನಿಶ್ಚೈಸಿದೆ ॥ ೫ ॥

## ೭೪. ರಾಗ ನಾಟಿ, ಅಟತಾಳ.

ಆನಂದತೀರ್ಥ ಮತ ಪರಮ । ಆನಂದಸಾಧನ ತಿಳಿ ಕಂಡ್ಯಾ ॥ ಪಲ್ಲ ॥ ಶಕುತಿಯಿದ್ದಷ್ಟು ತಿಳಿದು ಮತವು ಬಲು । ಯುಕುತಿಯಿಂದಲಿ ನೀ ಬಲಿಸು ಕಂಡ್ಯ ॥ ಭಕುತಿಯು ಗುರುಗಳ ಪದದಲಿ ಮಾಡಲು । ಮುಕು ತಿಯು ಕರವಶವಾಗುವದೋ ॥ ತಿಳಿಯದಿದ್ದರೆ ನೀನು ತಿಳಿದವರ ಬಳಿ ಯಲ್ಲಿ । ವಿಳಿತನಾಗಿ ಪೋಗಿ ತಿಳಿದುಕೊಳ್ಳೊ ॥ ಖಳ ಜನ ಸಹವಾಸ ಕುಮತಗಳಭ್ಯಾಸ । ಒಳಿತಲ್ಲವೋ ನಿನಗೆಂದಿಗನ್ನಾ ॥ ೨ ॥ ಪ್ರವಚನ ಮಾಡುವ ಬುಧಜನ ಪೇಳುವ । ಸುವಚನ ಕೇಳಿ ನೀ ಬದುಕು ಕಂಡ್ಯ ॥ ಕವಚವು ನಿನಗಿದು ಭವಭಳಿ ಬಾಧೆಗೆ । ಪ್ರವಚನ ಬಾಹೊದೆಂದಿಗನ್ನ ॥ ॥ ೩ ॥ ಇದ್ದವರಿಗೆ ಕೊಟ್ಟು ಅವರ ಹಿಂದೆ ಇಪ್ಪು । ಮೆದ್ದರೆ ಕೋಟಿ ಭೋಜನದ ಪುಣ್ಯಾ ॥ ಗೆದ್ದರೂ ಅವರನ್ನ ನಂಬಿದ ಜನರು । ಬಿದ್ದರು ದೂಷಕ ಜನ ತಮದಿ ॥ ೪ ॥ ಕಾಷುವೀಷಕೆ ನೀನು ಮೋಸಗೊಳಲು ಬ್ಯಾಡ । ತಾಸುಘಳಿಗೆ ನೆಚ್ಚಲು ಬೇಡ ॥ ಏಸೇಸು ಸುಕೃತದಿ ದೊರಕಿತು ಈ ಮತ । ವಾಸುದೇವವಿಠಲನ್ನ ಪಾಡೋ ॥ ೫ ॥ ಶ್ರೀಃ ।

## ೭೫. ರಾಗ ನಾದನಾಮಕ್ರಿಯೆ, ಅಟತಾಳ.

ಗಣನಾಥನ ಗಾಯನ ಮಾಡೋ ॥ ಪಲ್ಲ ॥ ಗಾಯನ ಮಾಡೋ ಗಾ ಯನ ಮಾಡೋ ವರಗಳ ಬೇಡೋ ॥ ಅನುಪಲ್ಲ ॥ ಆದಿಗೆ ಪೂಜೆಗೆ ಆಕರನೀತ । ಸಾಧನಸಂಪದಕೆ ಸುಮ್ಮನ ನೀವ ॥ ೧ ॥ ಭವ ಸಂಭವ ಭವಹರನೀತ । ಭಾವಜನಯ್ಯಗೆ ಅತಿ ಪ್ರೀತ ॥ ೨ ॥ ಮೂಷಿಕವಾಹನ ಲಂಬೋದರ ಶಕ್ತ । ಪಾಶಾಂಕುಶ ಮೋದಕ ಹಸ್ತ ॥ ೩ ॥ ಭುಜಗ

ಬಂಧನ ಗಂಧದ ಲೇಪ । ಗಜವದನನ ಸುಪ್ರತಾಪ ॥ ೪ ॥ ಸುರಋುಷಿ ನರರಿಂಗೊಲಿವದಾತನೆ । ನಿರುತ ವೆಂಕಟವಿಠಲನ ದೂತ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೭೬. ರಾಗ ಭೈರವಿ, ಅಟತಾಳ.

ವಾಯು ಶ್ರೀಮಧ್ವರಾಯನಾದನೂ ॥ ಪಲ್ಲ ॥ ವಾಯು ಶ್ರೀಮಧ್ವರಾಯ ನಾಗಲು । ಕಾಯಜ ವೈರಿ ಶಚಿಯರಸಾದಿ । ನಾಯಕ ಪ್ರಮುಖಾದಿ ತೀಯರೆಲ್ಲರು ಕ । ರೆಯುತಿರೆ ಪೂಮಳೆ ಅಂದು ॥ ಅನುಪಲ್ಲ ॥ ಅಂದು ದಿತಿಜರು ವೃಂದಾರಕರೆಲ್ಲ ಸಿಂಧು ಮಥಿಸಲು । ಬಂದಸುಧೆಯ ಮುಕುಂ ದನು ಬಡಿಸುವದೆಂದು ಕೊಟ್ಟದನು ತಂದಮರ ವೃಂದ ಕಂಡುಣಿಸೀ ॥ ನೊಂದು ಕೊಂಡಾ ದೈತ್ಯರಿಂದಿರೆಯರಸನ್ನ ನಿಂದಿಸಬೇಕೆನ್ನುತೆಂದು ಭೂಮಿಯೊಳು । ಬಂದು ಕುಯುಕ್ತಿಗಳಿಂದ ಸುಜ್ಞಾನದ ಕುಂದಿಗೆ ಮತಿಯಾಗುವಂದದಲಿ ॥ ೧ ॥ ಆಗ ಬ್ರಹ್ಮಾದಿಗಳ್ ಸಾಗರಶಾಯಿಗೆ । ಬಾಗಿ ಬಿನ್ನೈಸಿದ ಭೋಗಿಶಯನನೆ ನೀ ಕಳಬೇಕಾದೋಷಗಳೆ ನ್ನಲು । ನಾಗಶಯನ ಮತ್ತಾಗ ಕೇಳಿ ॥ ಸಾಗಿ ಪವನ ನೀ ವೇಗದಿ ಧರೆ ಯೊಳಾ । ಗಾಗಿರುವ ಕುಮತಗಳ ಖಂಡಿಸಿ ನಾಗುಂದಿಪ ಸಜ್ಜನರಘಂ ಗಳ । ಪೋಗ್ಯಾಡಿಸುವದು ನೀನೀಗೆನಲು ॥ ೨ ॥ ಪುಲ್ಲನಯನ ಶ್ರೀನಲ್ಲ ನಾಡಿದೀಪರಿ । ಪಲ್ಲಿಪದಕ್ಷಿಳೆಯಲ್ಲಿ ಮಧ್ಯಗೇಹನಲ್ಯವತರಿಸಿ । ಬಾಲ್ಯ ದಿ ಬಹು ಪರಿಯಲ್ಲಿ ಕ್ರೀಡೆಗಳನೆಲ್ಲವಾಡಿ ॥ ಬಲ್ಲಚ್ಯುತಪ್ರೇಕ್ಷರಲ್ಲಿ ಸನ್ಯಾ ಸಗೊಂ । ಡಲ್ಲಿಂದನಂತೇಶನಲ್ಲಿಗೆ ಸೇರಿ ಶ್ರೀವಲ್ಲಭನ ಜ್ಞಾನ । ವೆಲ್ಲ ಬೆಳ ಕಿಸಿ ಸಲ್ಲಿಸುತ ಜಗವೆಲ್ಲವನು ॥ ೩ ॥ ದಂಡಕಮಂಡಲುಗೊಂಡು ಕಾಷಾ ಯವ । ಚಂಡಿಕೆಯಿಲ್ಲದೆ ಚಂಡಕಿರಣ ಮತ್ತುಂಡ ಭಿಕ್ಷಾನ್ನ ಭೂ । ಮಂಡಲ ಸುತ್ತ್ಯಾಡಿ ಪುಂಡರೀಕಾಕ್ಷನ ತೋಂಡನೆಂದು ॥ ಪುಂಡು ಮಾ ಯಿಗಳ ಮಂಡೆಯೊಡೆಯುತ । ಪಂಡಿತರೊಳೆಲ್ಲ ಗಂಡು ಕೇಸರಿಯಂತೆ ಹಿಂಡು ದೈವಂಗಳ । ಗಂಡ ಹರಿಯೆಂದು ದಿಂಡು ದುರಿತ ಮಾರ್ತಾಂಡ ನಾಗಿ ॥ ೪ ॥ ಸೃಷ್ಟಿಯೊಳ್ ದ್ವಾರಕ ಪಟ್ಟಣದೊಳಿದ್ದ । ಕೃಷ್ಣ ನಾವೆ

ಯೊಳಿಟ್ಟು ತರಲೊಬ್ಬ । ಬಟ್ಟೆಯೊಳು ಸುಳಿಯಟ್ಟಿ ಬರುತಿರೆ ಕಟ್ಟೆ ಶಿರದಲ್ಲಿ ॥ ತಟ್ಟಲಾಗೆ ಬಟ್ಟೆಯನ್ನಾರಿಸಿ ಕಟ್ಟೆಗೆ ಬಂದ ಶ್ರೀಕೃಷ್ಣನುಡುಪಿಯೊ । ಳಿಟ್ಟು ಸಂಪೂಜಿಸಿ ಶಿಷ್ಟರಿಗಾನಂದ ಕೊಟ್ಟುಂಡು ವಾ । ಸಿಷ್ಟಕೃಷ್ಣನಿದ್ದಲ್ಲಿಗೆ ಮುಟ್ಟಲಾಗೆ ॥ ೫ ॥ ಬಂದ ಯತಿಯ ನೋಡೆಂದು ಮುನಿವರ । ಚಂದ್ರನೊ ರುದ್ರನೊ ದೇವೇಂದ್ರನೊ ಯೆಂದು । ಗಂಧವಾಹಯತಿಯಂದದಿ ಬಂದ ಚಂದವ ನೋಡುನೋಡೆಂದೆನಲು ॥ ಗಂಧರ್ವರು ಕುಸುಮವ ತಂದು ಸುರಿಯಲು । ವೃಂದಾರಕರೆಲ್ಲಾನಂದದಿ ಪೊಗಳಲಿಂದು ರವಿಕೋಟಿಯಂದದಿ ಬೆಳಗ । ತಂದು ಶ್ರೀವ್ಯಾಸರ ಪೊಂದಿಕೊಂಡು ॥ ೬ ॥ ಓದಿ ವೇದಾದಿಗಳ್ ವೇದಾಂತಗಳನು । ವಾದಿಸ ಬಂದ ದುರ್ವಾದಿಗಳ ಗೆದ್ದು । ಮಾಧವಗೆ ಪರನಾದಿ ಮೂರುತಿ ಪಂಚ ಭೇದವೆ ಸತ್ಯವೆಂಬುದನಿನ್ನು ॥ ಮೇದಿನಿಯೊಳೆಲ್ಲ ಸಾಧಿಸಿ ಜಗದ್ಯಗಾಥಕೀರ್ತಿ ಮೆರಸಿದ ಕೃಪಾನಿಧೇ । ಮೋದಿ ಲಕ್ಷ್ಮೀಶ ಶ್ರೀವೆಂಕಟವಿಠಲನ್ನ । ಪಾದವನರ್ಚಿಸುತಾದರದಿ ॥ ೭ ॥ ಶ್ರೀ ॥

### ೭೭. ರಾಗ ಪೂರ್ವಿ, ಅಟತಾಳ.

ಜತೆಗಾಣೆ ಆರ್ತಜಾಣೆ ॥ ಪಲ್ಲ ॥ ಕ್ಷಿತಿಯೊಳು ಮದನ ಪಿತನ ಪಟ್ಟದರಾಣಿಗೆ ॥ ಅನುಪಲ್ಲ ॥ ಪಂಕಜಚರಣೆ ಕಳಂಕರಹಿತ ಮೃ । ಗಾಂಕನಪೋಲ್ವ ವಿಮಾನಾಂಕನ ಜನನಿಗೆ ॥ ೧ ॥ ಚಂದಿರವದನರವಿಂದನಯನಶುಭ । ಕುಂದರದನೆ ಇಭ ಮಂದಗಮನೆಗೆ ॥ ೨ ॥ ಸುಂದರ ವಿಗ್ರಹಶ್ರೀಪತಿವಿಠಲನ । ಅಂದದಿ ಒಲಿಸಿದ ಇಂದಿರೆಯಳಿಗೆ ॥ ೩ ॥ ಶ್ರೀ ॥

### ೭೮. ರಾಗ ಭೈರವಿ, ಆದಿತಾಳ.

ಬಡವನ ಮನೋರಥ ಪೂರೈಸೊ ಹರಿಯೆ ॥ ಪಲ್ಲ ॥ ಒಡೆಯ ನೀನಲ್ಲದೆ ಪೂರೈಸುವರಿಲ್ಲ ॥ ಅನುಪಲ್ಲ ॥ ಕಿವಿಯ ನೀಡಿದುದಕೆ ಎನಗೊಮ್ಮಾದರೂ ಮನಸು ಪರಿಯ ಭೃತ್ಯತನ ಕೊಡು ಕಂಡ್ಯ । ಸುವಿಮಲತರಮುರಿಯಾದ ವಿಷ್ಣುರತೋ । ದ್ಧವನ ಬಳಿಯಲೊಮ್ಮೆ ನಿಲ್ಲಿಸೊ ಹರಿಯೆ ॥ ೧ ॥ ರಸನವು ಯೆನಗಿನ್ನು ಕೃಪೆ ಮಾಡಿದುದಕೆ ಗೋ । ರಸವ

ಕಟ್ಟುಮೆಟ್ಟುವ ಕಾಲದಲಿ ॥ ಇಸುಕೊಂಬ ಗೋವಳರ ಒಳಗೆ ಯೆನ್ನನು ಒಬ್ಬ । ಶಿಶುವಿನ ಮಾಡಿ ಪುಟ್ಟಿಸು ಕಂಡ್ಯ ಹರಿಯೆ ॥ ೩ ॥ ಯೆನಗೆ ನೀ ತ್ವಗಿಂದ್ರಿಯುವ ದಯುಮಾಡಿದುದಕೆನ್ನ । ಜನಕ ಭೀಷ್ಮಕಸುತೆ ಕರಕಂಜದಿ ॥ ಅನುವಾದಿಷ್ಟಕ ಭವಸರಯು ಯಮುನಾ ತೀರ । ಜನಿತವಾಳುಕ ಭವವನು ಕೊಡೊ ಹರಿಯೇ ॥ ೪ ॥ ನಾಸಿಕವು ಇತ್ತುದಕೆ ಗೋಪಿಯರ ವಿಹರದಿ । ವಾಸುದೇವ ವಿಠಲ ನಿನ್ನ ಕೊರಳೊಳಿದ್ದ । ನೂಸಿಬಿದ್ದ ಮಾಲಿಕೆಯ ಕುಸುಮಗಳಾ । ವಾಸನಗೊಳುವ ಮಧುಕರ ಭಾವನೀಡೋ ಹರಿಯೇ ॥ ೫ ॥ ಶ್ರೀಃ ॥

೨೯. ರಾಗ ಪಂತುವರಾಳಿ, ಅಟತಾಳ.

ನಿನ ಪೇಳಲಿ ಈ ಕರಕರಿಯಾ ಶ್ರೀಹರಿ ನೀನರಿಯಾ ॥ ಪಲ್ಲ ॥ ಶ್ರೀನಿವಾಸನೆ ನಿನ್ನ ಘೇನಿಸದಲೆ ಭವ । ಕಾನನ ದೊಳಗಿದ್ದು । ತ್ರಾಣ ಗುಂದಿಸುತಿದೆ ॥ ಅನುಪಲ್ಲ ॥ ಜ್ಞಾನಾನಂದಾತ್ಮಕ ಜೀವರ ಒಂಗೆ ಅಗುಣಾತ್ಮಕ ಲಿಂಗದಿ । ಶ್ರೀನಾರಿ ಅಧಿಕೃತಳಾಗದರೊಳಗೆ ಷೋಡಶಕಳೆ ಸಹಿತದಿ ॥ ಅನಾದಿಕರ್ಮವು ನಾನಾ ಬಗೆಗೆ ಕಾರಣ ವಡಗಡಿಗೆ । ಪ್ರಾಣಾದ್ಯಮರರ ನೀನಿಯಾಮಕ ಓನಳೆನಿಸು ಕ್ರಿಯಕಾನುಕೂಲಿಸಲಿ ॥ ೧ ॥ ತಮ ಮೋಹ ಮಹಾ ಮೋಹನಾದ್ಯವಿದ್ಯಾ ಪಟಲಕೆ ಕೃದ್ಧೋಲ್ಕಾದ್ಯಮಿತ ರೂಪಾತ್ಮಕ ನೀನನವದ್ಯಾ ಉ । ತ್ಕ್ರಮದಿಂದಾಚ್ಛಾದಕ ಯೆರಡಚ್ಛೇದ್ಯಾ ಈ ಜೀವರಿಗೆ ಛೇದ್ಯಾ ॥ ಯಮನಿಯಮನೇಮದಿ ಶಮದಮೋತ್ಸಾಹದಿ । ಆ ಮಹಿಮನೆ ನಿಮ್ಮ ದಯವೊಂದಲ್ಲದೇ ॥ ೨ ॥ ಲಿಂಗೋಪಾದಾನಕೆ ಅನಿರುದ್ಧಾಂಗ ಪುಟ್ಟುವ ಧವಳಂಗಾ । ಮಂಗಳ ಮಹಿಮನೆ ನೀ ನಿಸ್ಸಂಗ ಚತುರ್ವಿಂಶತಿ ತತ್ವವ । ನಂಗಾದ್ಯಮರರ ಸ್ಥಾನೋತ್ತುಂಗವಾಗಿದೆ ಭವಭಂಗಾ । ಮುಂಗಾಣದೇ ಸ್ಥೂಲಾಂಗವ ಧರಿಸ್ಯನಂಗನ ಕೇಳಿಗೆ ಮನಗೈಸುತಲಿದೆ ॥ ೩ ॥ ಕಲತಿಪ್ಪಾ ಧಾರ್ಮಿಕರೆಲ್ಲಾ ಬಲ್ಲಿದರು । ಕಲಿಕಾಡುವ ಖಳರು ನೆರೆಗಾಣದ ದುರುಳನ ಪ್ರಾಣಿಗೆ ಬೆದರು । ಸುಲಭವೇ ಈ ತೊಡರು ಜಲಜಾಕ್ಷ ನೀನಲ್ಲದೆ ಬಿಡಿಸುವರಾರು ಇಳಯೊಳ್. ನೀ ತೋರು । ವಲಿಸುವ ಬಗೆ ನೀ ನೊಲಿಯದಲಾವ ದೇವಕೆ ಕರುಣೆಯ

ದುರ್ಬಲ ಪಾಮರ ನಾನೇ ॥ ೪ ॥ ಪಾಪಾತ್ಮಕಲಿಗಕ್ಕರ ಯೆಲ್ಲಿಹುದೊ ನೋವಿಸಪಡೆ ಹಿಂದೋ । ಕಾಪಾಡಲು ನಿನಗೆ ಕಠಿಣವಾಗಿಹದೊ ಈ ಸಂ ಬಹಪದಂದೋ । ವ್ಯಾಪಾರ ನಿನ್ನದು ಯೆನಗೆ ತಿಳಿದೊ ಪಾಲಿಸು ನೀ ಕರದು । ಶ್ರೀಪತಿವಿಠಲವೆಲೊ ಪಯಣಿಸದಯಾಪರ ಮೂರುತಿ ಕಾ ಪಾಡುವದೊ ॥ ೫ ॥ ಶ್ರೀಃ ॥

## ೮೦. ಕೇದಾರಗೌಳ. ಝಂಪೆತಾಳ.

ಯಾತರವ ನಾನಲ್ಲವ್ವೊ? ॥ ಪಲ್ಲ ॥ ಹರಿ ಬರಿದೆ । ಖ್ಯಾತಿಯನೆ ತಂದಿ ತ್ತ್ರಯಾ ॥ ಅನುಪಲ್ಲ ॥ ಮಾತುಗಳು ನಾಲ್ಕಾಡುವೇ ಸಭೆಯಲ್ಲಿ । ಪ್ರೀತಿ ಬಡಿಸುವೆ ನರರನ್ನೂ ॥ ರೀತಿಯಲಿ ಶ್ರುತಿಸ್ಮೃತಿಗಳಾ ಪಠಿಸಿರಿ । ನಾಥ ನಿನತೋಷಿಸಿದೆನೇ ॥ ೧ ॥ ಜಪಮಣಿಗಳನು ತಿರುಹುತಾ ಲೋಕರನು । ಕಪಟಗೊಳಿಸಿದೆನಲ್ಲದೇ ॥ ಜಪಮಾಡಿದೆನೆ ನಿನ್ನಯ ಮನದಲ್ಲಿ । ಕೃಪೆ ಯಿರಿಸುವ ತೆರದಲಿ ॥ ೨ ॥ ದಾಸವೇಷವ ಧರಿಸಿದೆ ಕನಕ । ವಾಸನೆ ಯಿಂ ವಲ್ಲದೆ ॥ ವಾಸುದೇವವಿಠಲ ಶರಣೆಂಬೆ ಲೇಸು ಲೇಸಾಗಿ ಸಲಹೊ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೮೧. ರಾಗ ನಾದನಾಮಕ್ರಿಯೆ. ಏಕತಾಳ.

ಭಜ ಭಜ ಶ್ರೀಜಯರಾಜೇಂದ್ರಂ ಭಜ ॥ ಪಲ್ಲ ॥ ಸಕಲಾಘವರ್ಗ ತಮಾ ಲನಿಕರ ದಾವಾನಲ ॥ ಸಕಲತನಿಜಜನ ಭವಭಯ ಜಾಯಂ ॥ ೧ ॥ ತತ್ವಪ್ರಕಾಶ ನ್ಯಾಯಸುಧಾಕರ । ತತ್ವಜ್ಞಕುಲ ಜಲನಿಧಿ ಉದಾರಂ ॥ ॥ ೨ ॥ ನರಹರಿ ಚರಣ ಸರಸಿರುಹ ಮಧುಕರ । ಚರಣ ಶರಣ ವಿದ್ಯಾ ಕಾಂತೋಽಹಂ ॥ ೩ ॥ ಶ್ರೀಃ ॥

## ೮೨. ರಾಗ ನಾದನಾಮಕ್ರಿಯೆ, ಏಕತಾಳ.

ಕೊಡುವನು ಸುಖಗಳ ಜಾಣ ಜಯಮುನಿ ॥ ಪಲ್ಲ ॥ ಶ್ರೀಕರ ನ್ಯಾಯ ಸುಧಾಕರನಿದನೂ । ಸಖ್ಯನ ಕುಮುದಕೆ ಹಿತಕರ ಜಯಮುನಿ ॥ ೧ ॥ ನಂದಿಮುನೀಂದ್ರವಂಶಕೆ ತಿಲಕ । ಕುಂದ ಶರಣರ ಪೊರೆವನು ಜಯ

ಮುನಿ ॥ ೨ ॥ ದುರ್ಮತ ತೂಲ ದಾವಾನಲನಿವನೂ । ಸನ್ಮತ ಜಲಧಿಗೆ ಚಂದ್ರಮನು ॥ ೩ ॥ ಕೃಷ್ಣರಘೂತ್ತಮ ವ್ಯಾಸರ ಪಾದವ । ನಿಷ್ಠೆಲಿ ಬಹು ವಿಧ ಪೂಜಿಸಿದ ಜಯ ಮುನಿ ॥ ೪ ॥ ನಿರುತದಿ ವಿದ್ಯಾ ಕಾಂತನ ಪೊರೆವಾ । ನರಹರಿ ಭಕತರ ಶಿರೋಮಣಿ ॥ ೫ ॥ ಶ್ರೀಃ ।

## ೮೩. ರಾಗ ಧನ್ಯಾಸಿ. ಅಟತಾಳ.

ಇದಿಯಾರೊ ಗುರುವೆ ಸಮಯಾರೋ ದುರುವಾದಿಗಳನು ಮರುಳ ಮಾಡೋರನ್ನ । ತರದಿಟ್ಟು ಚಂದ್ರಿಕ ಗ್ರಂಥವಂ ರಚಿಸಿ ॥ ಧರಣಿ ಸುರರ ಪರಿವೃಥರ ಸುನಿಕರಕ್ಕೆ । ಪರಿಪರಿಯಲ್ಲುಪದೇಶಿಸುತಿಪ್ಪಗೆ ॥ ೧ ॥ ಕನಕ ಕಶಿಪು ತನಯನ ಘನ ಅಂಶದಿ । ಫಣಿಗಣ ರಮಣನ ವೇಷದಿ ಪೊಳೆಯುತ ॥ ದಿನದಿನದಲ್ಲಿ ಹರಿ ಮನದಣಿಸುತಲಿಪ್ಪ । ಘನಮಹಿಮನೆ ಯತಿಕುಲ ತಿಲಕ ॥ ೨ ॥ ಲಂಡವಾದಿಗಳೆಂಬೊ ದಂಡವೇ ತಂಡಕ್ಕೆ । ಗಂಡುಸಿಂಹ ತರ್ಕತಾಂಡವ ಯುಕುತಿಯ । ಪಂಡುಗಳನೆ ಕಟ್ಟಿಕೊಂಡ ತಾರ್ಕಿಕರ । ಷಂಡಗಳನು ಖಂಡಿಸುತಿಹ ಯತಿಯು ॥ ೩ ॥ ಬ್ರಹ್ಮಣ್ಯ ತೀರ್ಥರ ಕರಕಮಲದಿ ಪುಟ್ಟಿ । ಬ್ರಹ್ಮಜನಕ ನರಸಿಂಹ ಮೂರುತಿಯ ಹೃತ್ತು । ಗಹ್ವರದಲಿ ಧ್ಯಾನಿಸುತಿಹ ವ್ಯಾಸರಾ । ಜಾಹ್ನವಿಯಂದಿಂ ಭುವಿಯೊಳ್ಮೆರದೆ ॥ ೪ ॥ ದಶದಿಶೆಯಲಿ ದಶರಥಸುತ ಮಹಿಮೆಯ । ಕುಶಲದಿಂದಲಿ ಸಭೆಯೊಳಗೆ ಸ್ಥಾಪಿಸುತ ॥ ಹೊಸ ಹೊಸ ಬಿರದು ತಂಥೆಸರು ವೆತ್ತಿರುವಂಥ । ವಸುಧೆಯೊಳಗೆ ಸೂಕರ ಸುಚರಿತಗೆ ॥ ೫ ॥ ಹೊಳೆಯುತಲಿರುವ ರುಗ್ಮಿಣಿ ಪತಿ ಕೃಷ್ಣನು । ನಲಿಯುತ ಕುಣಿಕುಣಿದಾಡುತಲಿಪ್ಪನು ॥ ಥಳಥಳಿಸುವ ರಾಮವೇದವ್ಯಾಸರು ನಿಮ । ಗಿಳೆಯೊಳ ಮೂಲ್ಯ ಪ್ರಸಾದವನೀವರು ॥ ೬ ॥ ಶ್ರೀದ ವಿಠಲಗತಿ ಪ್ರಿಯರಾದ ಶ್ರೀಪಾದರಾಯರಲ್ಲಿ ಓದಿ ಗ್ರಂಥಗಳ ॥ ವಾದಿರಾಜವಿಜಯೀಂದ್ರ ಪ್ರಮುಖರಿಗೆ । ಆದರದಲಿ ಪಾಠ ಹೇಳುತಲಿಪ್ಪನೆ ॥ ೭ ॥ ಶ್ರೀಃ ।

## ೮೪. ರಾಗ ಕಲ್ಯಾಣಿ, ಅಟತಾಳ.

ವೃಂದಾವನ ನೋಡಿರೋ । ರಾಘವೇಂದ್ರ ರಾಯರ ॥ ಪಲ್ಲ ॥ ವೃಂದಾವನ ನೋಡಿ ಆನಂದ ಮದವೇರಿ । ಚಂದಾದಿ ದ್ವಾದಶ ಪುಂಡ್ರಾಂಕಿತ

ಗೊಂಬ ॥ ಅನುಪಲ್ಲ ॥ ತುಂಗಭದ್ರ ನದಿಯ ತೀರದಿ ಯಿದ್ದು । ತ್ತುಂಗ ಮಂಟಪ ಮಧ್ಯದಿ ॥ ಶೃಂಗಾರ ತುಲಸಿ ಪದ್ಮಾಕ್ಷಸರಗಳಿಂದ । ಮಂಗಳಕರ ಮಹಾಮಹಿಮೆಯಿಂದೊಪ್ಪುವಾ ॥ ೧ ॥ ದೇಶದೇಶದಿ ಮೆಚ್ಚುತ ಯಿಲ್ಲಿಗೆ ಬಂದು । ವಾಸವಾಗಿ ಸೇವಿಪ ॥ ಭಾಷೆಕೊಟ್ಟಂದದಿ ಬಹುವಿಧ ವರಗಳ । ಸೂಸುವಕರ ಮಹಾಮಹಿಮೆಯಿಂದೊಪ್ಪುವ ॥ ೨ ॥ ನಿತ್ಯ ಸನ್ನಿಧಿ ಸೇವಿಪ ಭಕ್ತರಿಗೆಲ್ಲ । ಮತ್ತೆ ಭೀಷ್ಟವ ಕರವ ॥ ಸತ್ಯದಿ ಗುಣ ಸಂಘ ವೆಂಕಟವಿಠಲನ್ನ । ನಿತ್ಯ ಸನ್ನಿಧಿಯಿಂದಾ ನಿರುತ ಪೂಜೆಯ ಗೊಂಬ ॥ ೩ ॥ ಶ್ರೀಃ ॥

### ೨೫. ರಾಗ ಕಮಾಚ್. ಆದಿತಾಳ.

ಕರೆದರೆ ಬರ ಬಾರದೇ ॥ ಪಲ್ಲ ॥ ವರ ಮಂತ್ರಾಲಯ ಪುರಮಂದಿರ ತವ ॥ ಚರಣ ಸೇವಕರು ಕರಮುಗಿದು ॥ ೧ ॥ ಹರಿದಾಸರು ಸುಸ್ವರ ಸಮ್ಮೇಳದಿ । ಪರವಶದಲಿ ಬಾಯಿ ತೆರದು ಕೂಗಿ ॥ ೨ ॥ ಪೂಶರಪಿತ ಕಮಲೇಶವಿಠಲನು । ದಾಸಾಗ್ರೇಸರ ಈ ಸಮಯದಿ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೨೬. ರಾಗ ಸುರುಟಿ, ಆದಿತಾಳ.

ತಂದೆ ವಿಜಯರಾಯ ಈ ವೇಳೆಗೆ ಬಂದ್ಯೊ ವಿಜಯರಾಯ ॥ ಪಲ್ಲ ॥ ಹಿಂದೇಸು ಜನುಮವು ಮುಂದೇಸು ಜನುಮವು । ಒಂದು ತಿಳಿಯೆ ನಾ ಯೆಂದೆಂದಿಗೂ ಯೆನ್ನ ॥ ಅನುಪಲ್ಲ ॥ ಸೂರ್ಯನ ಸುತನಂತೆ ಅಲ್ಲಿ ಮಹಾ । ಶೌರ್ಯ ದೂತರಂತೆ । ಕಾರ್ಯ ಅಕಾರ್ಯವು ತಿಳಿಯದೆ ತಮ್ಮ ಪರಿ । ಚಾರ್ಯನಯುಳಿಯಲು ಧೈರ್ಯವು ಮೊರೆಯಿಡೆ ॥ ೧ ॥ ಅದು ಧೈರ್ಯವು ನೋಡಿ ಸುದತಿ ತನ್ನ । ಹೃದಯ ಬದ್ಧಮಾಡಿ ॥ ಮಧುಸೂದನನೆ ಮೋವತೀರ್ಥರೆಂಬುದರಿನ್ । ವದರಿದಳ್ ವಿಜಯ ರಾಯರೇನ ॥ ೨ ॥ ಕರಗನನೆ ಕಟ್ಟಿ ಎಳೆಯುತಿರೆ । ಘೋರಗಳನೆಮುಟ್ಟಿ ॥ ಹರಿ ಮೋಹನವಿಠಲನ ಪಾದವ ತೋರಿ । ಧರೆಗೆ ತಂದು ಬಿಟ್ಯೊ ಕರುಣಾಳುವೆ ಯೆನ್ನ ॥ ೩ ॥ ಶ್ರೀಃ ॥

### ೭೭. ರಾಗ ಕಲ್ಯಾಣಿ. ರೂಪಕತಾಳ.

ವಿಜಯರಾಯರ ಪಾದ ಭಜಿಸಿದನನವರತ । ವಿಜಯವಾಹೊದಕೆ ಸಂ
ದೇಹವ್ಯಾಕೆ ॥ ಪಲ್ಲ ॥ ಗಜರಾಜ ವರದನಿಗೆ ನಿಜದಾಸನೆಂದೆನಿಸಿ । ದ್ವಿಜ
ಕುಲದೊಳಗೆ ಮೆರವರಾ ಇವರಾ ॥ ಅನುಪಲ್ಲ ॥ ಮೊದಲು ಋಷಿಗಳು
ಕಲಿತು ಸತ್ರಯಾಗವನಾ ನದಿತೀರದಲಿ ರಚಿಸಲು । ಪದುಮನಾಭ
ಭವನಾಂಕಭವನಂದು ಮುನಿವೃಂದ । ಹೃದಯ ಸಂಶಯ ತೋರಿ
ಸಲೂ ॥ ವಿಧಿವಿಷ್ಣುಶಿವರೊಳಗೆ ಉತ್ತಮರ ತಿಳಿಪಿರೆನೆ । ಮುದದ ಭವವ
ವಹಿಸಲು ಒದಗಿ ಭೃಗುಮುನಿಗಳೆ ಸರ್ವೇಶ ವೈಕುಂಠ । ಸದನನೇ
ನರುಹಿದವರೂ । ಇವರೂ ॥ ೧ ॥ ಆ ದೇವಮುನಿ ಪುರಂದರದಾಸರಾಗಿ
ಈ । ಮೇದಿನಿತಳಕೆ ಬರಲೂ । ಸಾಧು ಸಮ್ಮತವಾದ ಪಂಚಲಕ್ಷಕ್ಕೆ । ಪಾ
ವದ ನ್ಯೂನಪಿರಲೂ ॥ ಪಾದಸುಪೂರ್ತಿಸುವದು ಪುತ್ರನೆಂದುಹರ । ವಾದ
ರದಿ ಸೂಚಿಸಿದಲೂ । ಭೂದೇವ ಜನ್ಮದಿಂದು ದಾಸರಭಿಲಾಷೆ । ಸಾಧಿಸಿದ
ಸದಯದವರೂ । ಇವರೂ ॥ ೨ ॥ ವಿಯೆನಲು ವಿಮಲತೆಯು । ಜಯೆಂದ
ವಗೆ ಜಯವು । ಯಯೆನಲು ಯಾಗಫಲವು ರಾಯೆನಲು ರಾಜ್ಯಪದ
ಯಾಯೆನಲು ಯಮಭಟರು । ನೋಯಿಸರು ಅವನ ಕುಲವಾ ॥ ಈ ಯಾ
ವದಕ್ಷರ ಶಂಕಾರ ಸಹ ಪಠಿಸೆ । ಕಾಯಭವ ಪಿತನ ಬಲವು । ಜಾಯಾ
ಸಮೇತ ಮೋಹನ್ನ ವಿಠಲನ ಪಾದ । ತೋಯಜ ಭ್ರಮರರಿವರೂ ।
ಇವರೂ । ೩ ॥ ಶ್ರೀಃ ॥

### ೭೮. ರಾಗ ಶಂಕರಾಭರಣ. ಆದಿತಾಳ.

ಪತಿತಕೆನ್ನಾನಾಥವೆಂಬುವದೂ ಕರುಣಾಳು ಜಗ । ನ್ನಾಥದಾಸರ
ನೇರಿಕೊಂಬುವದೂ ॥ ಪಲ್ಲ ॥ ಭೀತಿಕರ ಬಹು ಜನ್ಮಕೃತ ಮಹಾ ।
ಪಾತಕಾದ್ರಿಗಳನ್ನು ಭೇದಿಸಿ । ಮಾತುಳಾಂತಕನಂಘ್ರಿ ಕಮಲದಿ । ನೀತ
ಭಕ್ತಿಯನೀಡಿ ಸಲಹುವ ॥ ಅನುಪಲ್ಲ ॥ ಘೋರತರ ಸಂಸಾರ ಪಾರಾ
ವಾರ ದಾಟಿಸುವಾ ಲಕ್ಷ್ಮೀಶ್ರೀ । ನಾರಸಿಂಹನ ನಿತ್ಯಪೂಜಾಭಾರವಹಿಸಿ
ರುವಾ ॥ ಮೂರು ಲೋಕೋದ್ಧಾರ ದುರಿತೌಘಾರಿ ಕೃಷ್ಣಕಥಾಮೃ
ತಾಬ್ಧಿಯ । ಸಾರತೆಗದು ಬೀರಿ ಕರುಣವ ಬೀರಾ ಸುಜನೋದ್ಧಾರ

ಮಾಡಿದ ॥ ೧ ॥ ವೇದಶಾಸ್ತ್ರಪುರಾಣವೆಲ್ಲವ ತೋರಿಸ್ಲಿಟ್ಟಿಹರು ಬಹು ವಿಧ । ವಾದ ದುರ್ಮತವಾದಿಗಳ ಮಾರ್ಗದಿ ಕಟ್ಟಿಹರೂ ॥ ನೋದ ತೀರ್ಥಮತಾನುಗತ ಸ । ದ್ವಾದ ಪೂರ್ಣ ಪರಮಾತ್ಮ ದರ್ಶನ । ಶ್ರೀದ ನೊಲಿದು ಕೃಪಾಕಟಾಕ್ಷ ಪ್ರ । ಸಾದ ಪೊಲಿವ ವಿನೋದಗೊಳಿಸುತ । ॥ ೨ ॥ ಶ್ರೀರಮಾಪತಿ ಸರ್ವ ಸುಗುಣಾಧಾರ ದಯದಿಂದಾ । ಮುರಲು ಸೇರಿ ಬರುವದು ಸರ್ವ ಸಂಪತ್ಸಾರವಾನಂದಾ । ಕಾರುಣಿಕ ತನದಿಂದ ಲಿಂತುಪಕಾರ ಮಾಡಿದ ದೀನ ಜನರಿಗೆ । ಧೀರ ಶ್ರೀದವಿಠಲನ ತೋರಿ ದನು ನಿಜ ಭಕ್ತ ಜನರಿಗೆ । ೩ ॥ ಶ್ರೀ ।

## ೮೯. ರಾಗ ಭೈರವಿ. ಅಟತಾಳ.

ಗುರು ಶ್ರೀನಿವಾಸಾ ಶರಣರ ಪೋಷಾ ॥ ಪಲ್ಲ ॥ ಗುರು ಶ್ರೀನಿವಾಸ ಶ್ರೀಚರಣ ಸೇವಕರನ್ನು । ಪರಿಪಾಲಿಸ ಬೇಕೊ ಪರಮೋಲ್ಲಾಸಾ । ॥ ಅನುಪಲ್ಲ ॥ ನಂಬಿದೆ ನಿನ್ನ ದಿವ್ಯ ಪಾದಾಂಬುಜವನ್ನೆ । ಕುಂಭಿನಿ ವಳಗೆನ್ನ । ಡಂಭವ ತೊಲಗಿಸಿ । ಅಂಬುಜಾಧರನಂಘ್ರಿ । ಸಂಭ್ರಮದಲಿ ತೋರೋ ॥ ೧ ॥ ಶರಣಾಳುತು ಜಲಾಧರುನಿಹತಾ । ಸರಿರೇ ತುಷಜಲ ಶರಣಾಗತ ರಕ್ಷಮಣಿ ತವ । ಚಿರದೇ ವಿಸರಿಸವೇಸಾರಿಕ ಆಜೇ । ಕಾರೇ ದಯಾಕರು ॥ ೨ ॥ ರಕ್ಷಿಂಚನನ್ನು ವಿಷಾಧ್ಯಾನಮು । ಯಿಚ್ಛೆಯಿಂತಿ ಹನು । ತುಚ್ಛ ವಿಷಯುಲನು । ನಿಚ್ಚಯಿಂಚ ಗವಸ । ಸಚ್ಚಿದಾನಂದು ನಿ ಸತತಮಿದ ವೇಮೋ ॥ ೩ ॥ ಉನರ್ನಾ (ಸೊ) ಚೊಲ್ಲ ಶಕ್ತಿನೆ ಯಿಪ್ಪಾ ಭಕ್ತವತ್ಸಲ್ಲಾ । ಅನುಮಾನತ್ತೆ ಕಡತಿ । ಸನುಮಾನಂ ಶಯ್ಯ ವೋ । ಘನಕರುಣಾಕರ ಅನುದಿನ ಮೊರೆವಾರೇ ॥ ೩ ॥ ಅರೆಮೊರೇದಾತ । ಗುರೂಜಿ ಪದಮ ಪ್ರಖ್ಯಾತಾ । ಸರಸಿಜೋದ್ಭವ ಪಿತ । ವೆಂಕಟವಿಠಲಕೆ ದರಸನ । ತರಿವಾರೇ ಮವಸುಪ್ರೀತಾ ॥ ೩ ॥ ಶ್ರೀಃ ॥

## ೯೦. ರಾಗ ಸಾವೇರಿ, ಆದಿತಾಳ.

ಶ್ರೀನಿವಾಸ ಗುರು ಗುಣಗಣಾಧೀಶ । ಪಾಲಿಸೋ ಭಕತರ ಪೋಷಾ । ನಿನ್ನ ದಾಸಾ ॥ ಪಲ್ಲ ॥ ನಾನು ನನ್ನದು ಯೆಂಬೊದು ಬಿಡಿಸಿ ಸು ।

ಜ್ಞಾನವ ಕೊಡಿಸಿ ಜ್ಞಾನವಂತರ ಸಂಗದೊಳ್ಳಿಡಿಸಿ । ಸನ್ಮಾನದಿ ನಡಿಸಿ ಮಾನಸದೊಳಗನುಮಾನವಿಲ್ಲದೆ ನಿನ್ನ । ಧ್ಯಾನವ ಪಾಲಿಸೊ ಹೀನತೆ ಯೆಣಿಸದೆ ॥ ೧ ॥ ಅಗ್ನಿಹೋತ್ರವ ನಡಸುವ ತೆರದಿ ಅಜ್ಞನನು ಮುದದಿ । ಸುಜ್ಞನೆನಿಸಿ ಕರಗಳ ಪಿಡಿದಿ ಅಜ್ಞಾನವ ಕಡಿದಿ ॥ ವಿಘ್ನಗೊಳಿಸಿದೆ ಸರ್ವಜ್ಞನ ಪಾದದಿ । ಮಗ್ನ ಮನನ ಮಾಡು ಪ್ರಾಜ್ಞಶಿರೋಮಣಿ ॥ ೨ ॥ ನಿನ್ನ ನಂಬಿದ ಪಾಮರ ನಾನು ಪಾವನ್ನ ನೀನು । ಎನ್ನ ಈ ಗುಣದೋಷಗಳನ್ನು ಯೆಣಿಸುವದೇನು ॥ ಅನಂತ ಪಾಪಿ ನಾನಾದರೂ ನೀ ಯೆನ್ನಾ । ಮನ್ನಿಸುವದು ಮಹಾ ಘನ್ನವೇ ಹೇ ಗುರು ॥ ೩ ॥ ಹರಿದಾಸನೆನಿಸಿದಾ ಬಳಿಕ ಯೆನ್ನಾ ಕಂಡೆಣಿಸಲು ನಿನ್ನ । ಬಿರಿದಿಗೆ ಸಲ್ಲುವದೇನೋ ಘನ್ನ ಗುರು ಶಿರೋರನ್ನ ॥ ಪರಮ ಪಾತಕಿ ನಾನಾದರೂ ನಿನ್ನಯ । ಚರಣಕ್ಕೆ ಸುತ್ತಿದ ಬಿಂದು ಬಿಡುವದುಂಟೇ ॥ ೪ ॥ ಅನ್ಯರಿಗಾನು ಯೆರಗುವನಲ್ಲ ನೀಬಲ್ಲೆಯಲ್ಲ । ಮನ್ನಿಸಿದಯದಿಂದೆನ್ನಯ ಸೊಲ್ಲ ಶಿರಿ ಲಕುಮಿಯನಲ್ಲ ಎನ್ನ ಒಡೆಯ ಗುಣರನ್ನ ವೆಂಕಟವಿಠಲೇ । ಶನ್ನ ತೋರಿಸಿ ಪಾವನ್ನನೆನಿಸುವದು ॥ ೫ ॥ ಶ್ರೀಃ ।

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧. ರಾಗ ಸಾವೇರಿ, ಆದಿತಾಳ.

ಗುರುರಾಯ ನಿನ್ನ ನಂಬಿದೆ ಕೇಳೊ ಶ್ರೀನಿವಾಸ ಕೃಪಾಳೋ ॥ ಪಲ್ಲ । ಅರಿಷಡ್ವರ್ಗದ ಗಂಟನು ಕೀಳೋ । ನಾ ನಿನ್ನ ಆಳೋ । ಅರಿತು ಅರಿತು ನೀ ಮರತರೆ ಯೆನಗೆ । ಪರಗತಿ ದೊರೆಯದೋ ವರವಾಶಿ ಪೇಳೋ ॥ ಅನುಪಲ್ಲ ॥ ಅರಿಯದಜ್ಞಾನಿಯನೆ ಕರತಂದು ನೀನಾಗಿ ಅಂದು । ವರಿಯಲು ತತ್ವದ ಮಾತೊಂದು ಹೇ ದಯಸಿಂಧು ॥ ಧರೆಯೊಳಗೆ ಇವ ಹಿರಿಯನೆಂತೆಂದು । ನರರೆಲ್ಲರು ಪರಿಪರಿಪಾಲಿಸುತಿಹರೋ । ॥ ೧ ॥ ಕರುಣದಿಂ ಪೊರೆ ನೀ ಮನವಿಟ್ಟು ಅಭಯವ ಕೊಟ್ಟು । ಗುರು ಪಾದಸಾರಸ ಶಿರದಲ್ಲಿಟ್ಟು ನೀ ನುಡಿದಷ್ಟು ॥ ಸ್ಥಿರವಾಗಲಿ ಧರೆಯೊಳಗೆಂದು ಮರದಡಿ । ವರವಿತ್ತ ತೆರಯೆನ್ನ ಕರವಿಡಿಯಲು ಬೇಕು ॥ ೨ ॥

ಅಂದು ನೀ ನುಡಿದದ ಸ್ಮರಣೆಗೆ ತಂದು ಎನಗೆ ಯಿಂದು । ಚಂದದಿಂದ ಲಿ ಪೂರಿಯುವದೆಂದು ಅನವರತಾ ಬಂದು ॥ ಕಂದನಾನೆಂದು ನಿಮ್ಮ ದ್ವಂದ್ವ ಪದಾಬ್ಜಕೆ । ವಂದಿಸುವೆನು ಯೆನ್ನ ತಂದೆ ತಾಯಿ ಯೆಂದು ॥ ॥ ೩ ॥ ಇಷ್ಟು ತೊರೆತದಕೆ ಧನ್ಯನೆನಲು ನೀನೊಲಿದು ಬಲು ಬಲು । ಯಿಷ್ಟಜನರೊಳಗೆ ಯಿವನೆನ್ನಿಸಲು ದ್ವಯಪಾದಗಳು ॥ ಕೊಟ್ಟು ನಿನ್ನ ಕಟ್ಟಾಳೆನಿಸಿದೆ ದಯವಿಟ್ಟು । ಕಷ್ಟತಟ್ಟದ ಅಷ್ಟವ ಕೊಡು ॥ ೪ ॥ ಪಾತಕಿ ಬಹುವಿಧ ಜಗದೊಳು ನಾನು ಪರಿಶುದ್ಧನು ನೀನು । ಯಾತ ಕನುಮಾನವ ಮಾಡುವಿ ಯಿನ್ನು ನರಸುರಧೇನು । ಮಾತಕೊಟ್ಟ ಮೇಲೆ ನೀತಿ ವಿಚಾರ ವಿ । ನ್ಯಾತಕೆ ಪೇಳಾನಾಥರ ಬಂಧೂ ॥ ೫ ॥ ಜಲಜ ಪುಟ್ಟುವದೋ ಕಲ್ಲಿನ ಮೇಲೆ ಶ್ರೀಹರಿಯ ಲೀಲೆ । ಬಲು ವಿಾರು ಚಲಿಸಿ ತೂಗುತಲೆ ಸಲೆ ಪಶ್ಚಿಮದಲೆ ॥ ಸುಲಭದಿ ಸೂರ್ಯನುದಿಸು ಅಗ್ನಿಯು ಶೀತಳವಾದರು । ತೊಲಗದು ಗುರುಗಳ ನುಡಿ ॥ ೬ ॥ ವಾರುಧಿ ಮೇಲೆ ತಪ್ಪಲು ಬಹುದು । ವಾರುಧಿಯೊಳ್ಹುಟ್ಟಿದ ಕ್ರೂರಗಳವು ಶಾಂತ ವು ಅಹುದು ॥ ಧಾರುಣಿಯು ಬಿರಿದು ಕಾರುಣಿಕದಾ ಕಾರ್ಯಗಳೊಪ್ಪಿ ಹುದು । ಸೂರಿ ಜನರು ಕೇಳ ಸಾರರು ನುಡಿಹುದು ॥ ೭ ॥ ದಾತ ನೀ ನಾದ ಬಳಿಕ ಯೆನಗೆ ಈ ಚರದಲಿ ಹೀಗೆ । ಕಾತುರ ಬಡುವುದು ಉಚಿ ತವೆ ಮಿಗೆ ತರವಲ್ಲೊ ನಿನಗೆ ॥ ಸೋತು ಮನವು ಸಂತೋಷದಲೆರಗುವೆ । ನೀತಿ ಹೀನರ ವ್ರತ ಘಾತಿಸಿ ರಕ್ಷಿಸೊ ॥ ೮ ॥ ಪಾಲುನೀರೊಳಗದ್ದಿದರು ನಿನಗಿನ್ನಾ ಯೆದುರು । ಹೇಳೋರ್‍ಯಾರಾದರು ಯಿದ್ದರು ತೋರೋ ಹೇ । ಕಲ್ಪತರೋ ಭಾರಿಭಾರಿಗೆ ಯೆನ ಭಾರ ನಿನ್ನದು ಬೇಗನೇ । ತೋರೋ ವೆಂಕಟವಿಠಲಮಾರಮಣನೆ ಈಗ ॥ ೯ ॥ ಶ್ರೀಃ ॥

೯೨. ರಾಗ ಶಂಕರಾಭರಣ. ಅಟತಾಳ.

ನಿನ್ನ ಮಹಿಮೆ ಘನ್ನವಯ್ಯಹ । ಹೇ ಶ್ರೀನಿವಾಸ । ನಿನ್ನ ಮಹಿಮೆ ಘನ್ನವಯ್ಯಹ ॥ ಪಲ್ಲ ॥ ನಿನ್ನ ಮಹಿಮೆ ಘನ್ನವಯ್ಯ । ಎನ್ನ ಗುರುವೆ ಶ್ರೀನಿವಾಸ । ಅನ್ಯರರಿಯದಿದರ ಬಗೆಯ ನಿನ್ನ ನಂಬಿದೆನಲ್ಲದೆ ॥

॥ ಅನುಪಲ್ಲ ॥ ಮೂಕಮಂದಮತಿಗಳಿಂದ । ನೇಕ ಚತುರ ನುಡಿಯ ನುಡಿಸಿ ॥ ಸಾಕಿದ ಗಿಳಿಯಂತೆ ಕರುಣದಿ । ವಾಕು ಶುದ್ಧಿಯ ಪೇಳಿದ ॥ ॥ ೧ ॥ ಪೊಡವಿಪತಿಯು ಹಾಟಕ ಕರದಿ । ಅಡವಿಯೊಳಗೆ ಕುಳಿತಿರಲು ॥ ಬಿಡದೆ ಅನ್ನ ವಸ್ತ್ರವನಿಟ್ಟು । ಬಡವನ ಬಲ್ಲಿದ ನೆನಿಸಿದೆ ॥ ೨ ॥ ಸಂಕಟ ದಿಂದ ಬಂದ ಜನರ । ಬಿಂಕದಿಂದ ಪಾಲಿಸುವಿ ॥ ವೆಂಕಟವಿಠಲ ನಿನ್ನ ಪಾದ । ಪಂಕಜ ತೋರೋ ಯೆನಗೆ ನೀ ॥ ೩ ॥ ಶ್ರೀಃ ॥

## ೯೩. ರಾಗ ಕೇದಾರಗೌಳ, ಅಟತಾಳ.

ಈಡು ಗಾಣೆನೈಯ ಜಗದೊಳಗೆ ॥ ಪಲ್ಲ ॥ ಬೇಡಿದಾಭೀಷ್ಟಗಳ ಕೊಡು ವ ಹನುವ ಭೀಮ ಮಧ್ವರಾಯಾ ॥ ಅನುಪಲ್ಲ ॥ ಅಷ್ಟದಿಕ್ಕಿಲಿ ಭೂಪ ರಾಳಿದ । ದುಷ್ಟರಾವಣನ್ನ ಪುರವಾ । ದೃಷ್ಟಿಸಿ ನೋಡಿ ಸಮರದಲಿ ಪ್ರಹರವನೆ ಕೊಡಲು । ಕಷ್ಟದಲಿ ಮೂರ್ಛಾಕೃತನಾಗಿ ಯೆದೆ । ಪಿಟ್ಟಾಗಿ ಸನಂತ ಕುಂದಿಸಿಯೆ ಕಂ । ಗೆಟ್ಟು ಹತ್ತು ದಿಸೆಗೆ ವೋಡಿಸಿದ್ಯೋ । ದಿಟ್ಟ ನಾಗಿ ನಿಂತ ರಣದಿ ಹನುಮಾ ॥ ೧ ॥ ನಾರದ ಅಯೋಧ್ಯದಿ ಪೇಳಲು । ಶ್ರೀರಾವಣ ಸೈನ್ಯಗಳು ವೋಡಿಸಿ । ವಾರುಧಿಗಳು ದಾಟಿ ಬೇಗ । ನೂರು ತಲೆ ಅಸುರನ ಪಟ್ಟದ । ದ್ವಾರ ಬಂಧಿಸಿ ಸಾಕಲ ದ್ವೀಪದಲ್ಲಿಪ್ಪ । ಕ್ರೂರ ಅಸುರನ್ನ ಕಾಲಿಲೊದ್ದು । ವರ ವಿಭೀಷಣ ಸುಗ್ರೀವರ ಪುಚ್ಛದಲಿ । ತಿರು ಸಿದಿಯೋ ಸಮರ್ಥ ಹನುಮಾ ॥ ೨ ॥ ರುದ್ರ ಬ್ರಹ್ಮರ ವರದಲಾವಧ್ಯ ನಾದ ಜರಾಸಂಧನ । ಅಧ್ವರ್ಯದಲಿ ಪಶುವಂದದಿ । ಮರ್ದಿಸಿ ದುಷ್ಟ ಖಳರ ಸೀಳಿದ್ಯೊ । ಖೇದರಾದ ನೃಪರ ಬಿಡಿಸಿದೆ । ಅಧ್ವರ್ಯನಾಗಿ ಯೋಗದಿ ನಿಂದೆ । ಯುದ್ಧದಲಿ ದುರ್ಯೋಧನನ ಕೊಂದ ಪ್ರ । ಸಿದ್ಧ ಭೀಮರಾಯ ನಿಮಗೆ ॥ ೩ ॥ ವಾದಿಗಜಕೆ ಮೃಗೇಂದ್ರ ವಾದಿವಾರಿಧಿ ಬಡಬ ಮಾಯಾ । ವಾದಿ ಪರ್ವತಕೆ ವಜ್ರ ಭೇದಮತಾಂಬುಧಿಗೆ ಚಂದ್ರ । ವೇದ ತೀರ್ಥಾನಂದಗೆ ಕೃಷ್ಣಾ ಅಷ್ಟವಾಳುಕ ಮುಷ್ಟಿತಂದೆ । ಸಾಧು ಜನರಿಗೆ ತತ್ವವು ಬೋಧಿಸಿದೆ । ಮೇದಿನಿಯೊಳು ಮಧ್ವರಾಯ ನಿಮಗೆ ॥ ೪ ॥ ಇಂದು ಮುಖಿ ಸೀತೆಗೆ ಮುದ್ರಿಕೆಯನಿತ್ತು । ವಂದಿಸಿ

ರಾಮನ ಕಥೆಯ ಪೇಳಿದೆ । ಅಂದು ರೋಮ ಕೋಟಿ ಶ್ರೀಪರಮಾದಿ ಪುರುಷ ಮೃಗವನೆ । ತಂದೆ ಚಂದದಿಂದ ಮಣಿಮಂತನ । ಕೊಂದು ಸೌಗಂಧಿಕವನೆ ತಂದೆ । ನಂದತೀರ್ಥರಾದ ಅಚಲಾ । ನಂದವಿಠಲನ ದಾಸ ನಿಮಗೆ ॥ ೫ ॥ ಶ್ರೀಃ ॥

೯೪. ರಾಗ ಕೇದಾರಗೌಳ. ಅಟತಾಳ.

ನಮೋ ನಮೋ ಪ್ರಾಣನಾಥ ಪ್ರೀತಾ ॥ ಪಲ್ಲ ॥ ಅಮಲ ಗುಣಗಣ ರಾಮದೂತ ನಿರ್ಭೀತಾ ॥ ಅನುಪಲ್ಲ ॥ ಅಂಜನಾದೇವಿಯಲಿ ಸಂಜಾತ ನೆನಿಸಿ ಕಪಿ । ಪುಂಜಗಳ ನೆರಹಿ ಅತಿ ವೇಗದಿಂದಾ ॥ ಸಂಜೀವನಾದ್ರಿ ಯನು ತಂದು ಕಪಿಗಳ ಕಾಯ್ದು ಪ್ರ । ಭಂಜನಾತ್ಮಜನೆನಿಸಿ ಮೆರದ ಮಹಾದಾತ ॥ ೧ ॥ ದ್ವಾಪರಾಂತದಿ ನೀನೆ ಭೂಪನುದರದಿ ಜನಿಸಿ । ಪಾಪಿ ದುಶ್ಶಾಸನನ ಬಸುರು ಬಗಿದಿ ॥ ಅಪಾರ ಮಹಿಮ ನಿನಗೆ ಎಣೆ ಗಾಣೆ ಜಗದಿ । ದ್ರೌಪದಿ ಪ್ರಿಯನೆನಿಸಿದ ಮಹಾದೇವಾ ॥ ೨ ॥ ರಕ್ಕಸರು ದ್ವೇಷರೂಪದಿ ಬಂದು ಶಾಸ್ತ್ರಗಳ । ಧಿಕ್ಕರಿಸಿ ಐಕ್ಯವನು ನೆರಹಿರಲು ॥ ಲಕ್ಷ್ಮಿಪತಿ ಗುರು ಮೋಹನ್ನವಿಠಲನೆ ಪರನೆಂದು । ಚಿಕ್ಕೇರಿ ಪುರದಲ್ಲಿ ನೆಲಸಿದ ಮಹಾಧೀರಾ ॥ ೩ ॥ ಶ್ರೀಃ ॥

೯೫. ರಾಗ ಆರಭಿ, ಆದಿತಾಳ.

ಸೂತ್ರನಾಮಕ । ಸುಂದರನೇಕ । ಸೂತ್ರನಾಮಕ ॥ ಪಲ್ಲ ॥ ಸೂತ್ರನಾಮಕ ಸತ್ಪಾತ್ರ ಗರುಡ ಶಿಖಿ । ನೇತ್ರವಿನುತ ಶುಭಗಾತ್ರ ಪವಿತ್ರ ॥ ಅನುಪಲ್ಲ ॥ ರಾಮಪದ ಭೃಂಗಾ । ರಾವಣ ಮದ ಭಂಗ ಗಜಸಿಂಗಾ ॥ ತಾಮಸಕುಲಕೆ ನೀ ಧೂಮಕೇತು । ಬುಧ ಸೌಮನಸಾಗ್ರಣಿ ಕಾಮಿತ ಫಲವೀವಾ ॥ ೧ ॥ ಪಾಂಡುನಂದನಾ ಪಾಲಿಸು ಯೆನ್ನಾ । ಖಂಡಪಾವನಾ ॥ ಅಂಡಜಾಧಿಪನ ಕಂಡು ಭಜಿಸಿದೋ । ದರ್ಂಡ ಖಳಕುಲ ಚಂಡ ಪ್ರಚಂಡಾ ॥ ೨ ॥ ಜ್ಞಾನದಾಯಕಾ ಆನಂದತೀರ್ಥ ದೀನ ಪೋಷಕ । ಭಾನುಕೋಟಿ ತೇಜ ವ್ಯಾಸ ವಿಠಲನ । ಧ್ಯಾನದೊಳಿಹ ಮಮ ಮಾನಸ ಹಂಸಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೯೬. ರಾಗ ವಸಂತ. ಅಟತಾಳ.

**ವಾ**ನರನೆ ವಾನರನೆ । ವನಚರನೆ ವಾತಾತ್ಮಜ ॥ ಪಲ್ಲ ॥ ಉದಧಿಯ ಲಂಘಿಸಿ ಪೋಗಿ । ಸೀತಾ ವನಿತೆಯ ರಾಮಗೆ ತಂದು ಪೋಷಿಸಿದನೇ । ॥ ೧ ॥ ಕುಂತಿತನುಜನಾಗಿ ಗದೆಯಿಂದಲಿ । ನಿಂತು ಕೌರವ ಕುಲವೆಲ್ಲ ಅಳಿದವನೇ ॥ ೨ ॥ ಬದ್ಧದಿ ಕುಹಕರನೆಲ್ಲ ಗೆಲಿದನಯ್ಯ ವಮ್ಮ ಮಧ್ವೇಶ ವಿಠಲನ್ನದಾಸ ಪ್ರಸಿದ್ಧಾ ॥ ೩ ॥ ಶ್ರೀಃ ॥

## ೯೭. ರಾಗ ಪಂತುವರಾಳಿ. ತಾಳ.

**ಕ**ರುಣಿಸೊ ಘಟಿಕಾಚಲ ವಾಸಾ ರಘುವರ ದಾಸಾ ॥ ಪಲ್ಲ ॥ ಅಖಿಳ ಜೀವರುಗಳ ಪೋಷಾ ॥ ಅನುಪಲ್ಲ ॥ ವಾಸುದೇವ ಚರಣ ಕಮಲವ ಸದಾ ಧ್ಯಾನವಾ । ಮಾಡುತಲಿರುವಾ ಪ್ರಿಯ ಮನಕೆ ಮೆಚ್ಚಿಕೊಂಡು ಭಾರವಾ । ವಿಚಾರವಾ ಯೋಚಿಸಿ ಶಿರವು ತೂಗುವಂಥ ಪದಕ ಯಿನ್ನು ಸರಿಯಿಲ್ಲ । ಮುಂದೆ ಯಿವನಲ್ಲ ನೇಮಿಸಿದೆಲ್ಲ ಬಲ್ಲ ॥ ೧ ॥ ಅಂಜನೆ ಉದರದಿ ಜನಿಸಿದಿ ವ್ರತವ ನಡಿಸಿದಿ । ಬಂದು ದಿನಕರ ಸುತನ ಸೇರಿದಿ । ಚತುರತನದಿ ಸಖ್ಯ ಮಾಡಿದಿ ಸೀ ಅಡಿದಿ । ರಾಮನ ಸೇವೆ ಬೇಡಿದಿ ಪರಿಪರಿ ಕಾರ್ಯಕೆ ಕೈಗೂಡಿದಿ । ಕಾಲನೋಡಿದಿ ಸ್ಥಿರವಾದ ಕರುಣ ಪಡದಿ ॥ ೨ ॥ ಕುಂತಿಸುತ ಭೀಮ ದಕ್ಷಕ ಅಸುರ ಶಿಕ್ಷಕ ಮಾನಿತಜನ ರಕ್ಷಕ । ಭೂಮಿ ಭಾರವು ಬೇಗ ಇಳಿಸಲು । ಅವತರಿಸಲು ಮಾಸಿಸಿ ಮಾತಾ ನಡಿಸಲು ಕೌರವಜನ ವೈರಬೆಳಸಲು । ಕದನ ಸಲಿಸಲು ಸರ್ವವು ಕೃಷ್ಣಗರ್ಪಿಸಲು ॥ ೩ ॥ ಬಾಲ ಮುಷಿದಿ ಕಾಂತಿ ಚಂದ್ರನು ಗುಣಗಣಸಾಂದ್ರನು । ನಿರುತಜ್ಞಾನದ ರಾಜೇಂದ್ರನು । ರಚಿಸಿ ವೈಷ್ಣವ ಮತವನು ಯೋಗಿವರ್ಯನು । ಭೇದಿಸಿದ ಅದ್ವೈತವನು । ಸೂತ್ರ ಸುಧಾದಿ ಗ್ರಂಥವನು । ಅಮೃತ ಪಾನವನು ಪ್ರೇಮದಿನಿಡಿಸುವನು ॥ ೪ ॥ ಮಣಿಯ ಮಕುಟವ ಕೇಯೂರವ । ತುಳಸಿ ಹಾರವ ಮೆರವ ಮಕರ ಕುಂಡಲವ । ನೊಸಲಲ್ಲಿ ತಿಲಕದ ಚಂದವು ಬಲು ಅಂದವು ಹಾಕಿದ ಯೋಗಾಸನವು । ಕರದಿ ಸರವು ಪಿಡಿದು ಜಪಿಸುವ ನಿತ್ಯ ಕೊಡಿಸುವ

ಬಂದವರಿಗೆ ವರವಾ ॥ ೫ ॥ ಜನ್ಮ ಅನೇಕಾದಿ ಸಂಚಿತ ಕರ್ಮ ಬಲವಂತ ನಾನಾ ಪರಿಯಲ್ಲಿ ಭ್ರಾಂತ । ಪಡಿಯೋರು ನೋಡಯ್ಯ ಹನುಮಂತ ಬಹು ಬಲವಂತ । ಬಿನ್ನೈಸುವೆ ಯೇಕಾಂತ । ದಯರಸ ನೀಡುವಿ ಧೀಮಂತ ಬಹು ಗುಣವಂತ । ಪಾಲಿಸೊ ಭಾರತಿ ಕಾಂತ ॥ ೬ ॥ ಇದಿರು ನೋಡುತಲಿರುವ ಕಪಿವರ । ಭವ ಭಯಹರ ನರಹರಿಯ ಚರಿತ್ರೆಯ ಸಾರ ಬೇಡಿ ಬಂದವರಿಗೆ ಬೀರಿಸುತ । ಘನ ಚರಿಸುತ ಲಾಲಿಸಿ ಮಾತ ಕೇಳುತ । ಧನ್ಯನ ಮಾಡಿಸೋ ಯೆನ್ನನೆ ಕರುಣಾಪಾಂಗನೆ ವೆಂಕಟವಿಟ್ಠಲನ ಭಕ್ತನೇ ॥ ೭ ॥ ಶ್ರೀಃ ।

## ೯೮. ರಾಗ ಮಧ್ಯಮಾವತಿ. ಅಟತಾಳ.

ಪ್ರಾಣನಾಥನ ನೋಡುವ ಬನ್ನಿ । ಹರಿದಾಸರೆಲ್ಲ ॥ ಪಲ್ಲ ॥ ಬೇಡಿದ ಮುಕ್ತಿಯನೀಡುವ ನಾಡೊಳು । ನೋಡುವ ಜನರ ಕಾಡುವ ನಮ್ಮ ಧೊರೆ ॥ ೧ ॥ ಇಂದಿರೆಯುರಸನ ಚರಣ ದ್ವಂದ್ವವ ಹೊಂದಿ । ಮಂದರಧರ ಮಧುಸೂದನ ಭಕ್ತನ ॥ ೨ ॥ ಹರಿಹರ ಕರಿವರದ ಪರಾತ್ಪರಾ । ಪುರುಷನ ಭಕ್ತನ ಪರಿಪಾಲಿಪ ನಮ್ಮ ॥ ೩ ॥ ಶ್ರೀದ ಹನುಮ ಭೀಮ ಮಧ್ವಾಂತರ್ಗತ । ರಾಮಕೃಷ್ಣ ವೇದವ್ಯಾಸಾರ್ಪಿತವೆಂದು ॥ ೪ ॥ ಸೃಷ್ಟಿಯೊಳಗೆ ಒಂದು ಮುಕ್ತಪುರಾನಿಂದು । ದುಷ್ಟದೈತ್ಯರ ಕೊಂದು ವೆಂಕಟವಿಠಲನ ದಾಸನೆಂದು ॥ ೫ ॥ ಶ್ರೀಃ ।

## ೯೯. ರಾಗ ಕಲ್ಯಾಣಿ. ತಾಳ.

ರಾಯರಿವರ ನೋಡಿರೊ । ಗುರು ಮಧ್ವ । ರಾಯರಿವರ ಪಾಡಿರೋ । ॥ ಪಲ್ಲ ॥ ನ್ಯಾಯಶಾಸ್ತ್ರಗಳಿಂದ ಮಾಯಿ ಮಲ್ಲರಗೆದ್ದು । ವಾಯುಸುತರೆಂದು ವರ ಪೆಸರನು ಪೆತ್ತಾ ॥ ಅನುಪಲ್ಲ ॥ ಎರಡನೆ ಯುಗದೊಳಗೆ । ಹನುಮಂತ । ಪರಮ ವೀರನೆನಿಸಿ ॥ ಧೊರೆ ರಾಮಚಂದ್ರನ್ನ ಚರಣ ಸೇವಕನಾಗಿ । ಪರಮ ಮೂಢರಾವಣನ ಮಗನ ಕೊಂದು ॥ ೧ ॥ ಕುಂತಿಗೆ ಮಗನೆನಿಸಿ । ಕೃಷ್ಣನಂಘ್ರಿ । ಸಂತತದಲಿ ಭಜಿಸಿ ॥ ನಿಂತೂ ದುರ್ಯೋಧನನ ಮಶ್ಯಾಸನರ ಕೊಂದು । ಕಂತು ಜನಕ ಯದುರಾಯಗರ್ಪಿಸಿದಂಥ ॥ ೨ ॥

ಮಂಕು ಸಂಕರ ಮಾಡಿದ । ದುರ್ಭಾಷ್ಯವ । ಬೆಂಕಿವಳಗೆ ಹೂಳಿದಾ ॥ ಶಂಕರನುತ ಶ್ರೀವೆಂಕಟವಿಠಲನ್ನ । ಕಿಂಕರರೊಳು ಶ್ರೇಷ್ಠ ಶ್ರೀಮದಾನಂದತೀರ್ಥ ॥ ೩ ॥ ಶ್ರೀಃ ॥

## ೧೦೦. ರಾಗ ಶಂಕರಾಭರಣ. ಆದಿತಾಳ.

ಭಾರತೀಶ ಮದ್ವಾರ ನಿನ್ನದಯ್ಯ । ಕರುಣದಿ ಪಿಡಿಯೊ ಕೈಯ ॥ ಪಲ್ಲ ॥ ಪೂರೈಸೆನ್ನ ಮನೋಭಿಲಾಷೆ । ಗುರುವೆ ಆಶ್ರಿತ ಸುರತರುವೆ ॥ ಅನುಪಲ್ಲ ॥ ಹರಿಭಕ್ತಾಗ್ರೇಸರ ಹನುಮಂತಾ । ಹರನುತ ಬಲವಂತಾ । ತರಣಿಕುಲಜ ಶ್ರೀರಾಮನಾಜ್ಞದಿಂದಾ । ಬಹು ಸನ್ಮುದದಿಂದಾ । ಶರಧಿ ದಾಟಿ ಸೀತಾಕೃತಿ ತಾನೋಡಿ ವನದೊಳಗೋಡ್ಯಾಡಿ । ದುರುಳ ರಾಕ್ಷಸ ಪುರವ ಸಖನಿಗಿತ್ತಾ ಲೋಕೈಕಸಮರ್ಥಾ ॥ ೧ ॥ ಕುಂತಿಜಠರಾಂಭೋನಿಧಿ ಚಂದಿರನೇ ರಾಜಾಗ್ರೇಸರನೇ । ಕಂತು ಜನಕನಿಚ್ಛಾನುಸಾರವಾಗಿ ರಣದಲಿ ಚನ್ನಾಗಿ । ನಿಂತು ದುಷ್ಟದುರ್ಯೋಧನಾದಿಗಳನೂ । ಸಂಹರಿಸಿದೆ ನೀನೂ । ಭ್ರಾಂತ ಜನರೇನು ಬಲ್ಲರ್ಯೆಯಾ ನಿನ್ನಾ । ಬಹು ಗುಣ ಸಂಪನ್ನಾ ॥ ೨ ॥ ನಡುಮನೆಯೆಂಬೊ ಬ್ರಾಹ್ಮಣನಾ ಮನೆಯಲ್ಲಿ । ಅವತರಿಸಿದೆ ಮುದದಲ್ಲಿ । ಮೃಡ ಸರ್ವೋತ್ತಮ ಹರಿಯೆ ತಾನೆಂದು ವಿಶ್ವಂ ಮಿಥ್ಯವೆಂದು । ನುಡಿವ ಜನರುಗಳ ಮತಗಳನೆ ನಿರಾಕರಿಸಿ । ಸಚ್ಛಾಸ್ತ್ರ ರಚಿಸಿ ಒಡೆಯ ತಂದೆ ಶ್ರೀಪತಿವಿಠಲನ್ನ ಪೂಜಿಪರವಿ ಘನ್ನಾ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೧. ಶ್ರೀರಾಗ, ಏಕತಾಳ.

ಮಧ್ವ ಮುನಿಯು ಮೋಕ್ಷವೀವನು ॥ ಪಲ್ಲ ॥ ಮಧ್ಯಾಲಯಜನಾಗಿ ಮನುಜಾಕಾರದಿಂದಿಹ ॥ ಅನುಪಲ್ಲ ॥ ಹರಿಸೂತ್ರ ಭಾಷ್ಯವ ಮಾಡ್ದನು । ದುಸ್ಸಂಕರ ಭಾಷ್ಯವ ಖಂಡಿಸಿದನು । ನಮ್ಮ । ಸಿರಿನಾಥಗನುಮತನಾದನು । ತದನಂತರದಲ್ಲಿ ಅಮರೇಂದ್ರವರದಿಂ ಸೇವಿತವಾದ । ಪರಿದೂಷಣಗಳ ಲಘುಲವದಿಂದಲಿ । ವಿರಹಿತವಾದ ಗ್ರಂಥ ತರಗಳ । ವಿರಚಿಸಿ ಘನಪವನಾತ್ಮಕ ಸುಮತಿಯು ಮುರರಿಪು ಸ । ರ್ವೋತ್ತಮನೆಂದರುಹಿ

ಇರುವೆಯು ಮೊದಲಾದಿಹ ಜೀವರರೊಳು । ಪರತರ ತಾನೆಂದೆನುತಲಿ ತಿಳುಹಿ ಪುರಹರ ಮಿತ್ರನ ಭಕ್ತರ ಸಲಹಿ । ಧರೆಯೊಳು ವಾದಿಪ್ರವರ ಕರಿಯ ಕೇಸರಿಯಂದದಿ । ಭಂಜಿಸಿ ಪರಮ ವಿಚಿತ್ರವಾದ ಕರಲೀಲೆಯ ತೋರಿ ಗೋದಾವರಿಯನೈದಿದನು ಧೀರಾ ॥ ೧ ॥ ವಿನಯಾದಿ ಗುಣ ಸಂಪನ್ನನು । ಸಜ್ಜನ ಸರ್ವ ವೇದಶಾಸ್ತ್ರಾಭಿಜ್ಞನು । ತನ್ನನು ನೋಡಿ ಭಕ್ತಿಯಿಂದ ನಮ್ರನು । ಸುಶೋಭನವೆಂಬಂಥ ನಾಮವನು ಐದಿದ ಬ್ರಾಹ್ಮಣಾಗ್ರಣಿಯೊಳು ಯಲ್ಲಿರೆ ಚರಮ ಸದಾಶ್ರಮವನು ಪಾಲಿಸಿ ಬಲು ಹರುಷದಿ ಕರುಣಿಸಿ ವನಜನಾಭನೆಂಬೊ ಪೆಸರಂ ರಚಿಸಿ । ಅನುಪಮ ಸನ್ಮಂತ್ರಗಳ ತಿಳಿಸಿ । ವಿನಯದಿಂದಲಿ ಸಂತೋಷವ ಧರಿಸಿ । ಸ್ವನಯೋತ್ತುಮದರ್ಥವನುಪದೇಶಿಸಿ । ಅನಘಾತ್ಮಕ ಜನರನುಪಕರಿಸಿ ಅನುಮತಿಯಿಂದಲಭೀಷ್ಟವ ಸಲಿಸಿ । ಅನಿಮಿಷರೊಳು ಗೈದ ಮುನಿರಾಜ ಕುಲರನ್ನ । ತನುವ್ಯಾಸಬದರಿಯ ಕುಳಿತು ತೆರಳಿದ ಧೀರಾ ॥ ೨ ॥ ತ್ರೇತಾಯುಗದಿ ಪಙ್ಕ್ತಿಸ್ಯಂದನ ತನಯ । ಸೀತಾರಮಣ ರಾಮಚಂದ್ರನ । ಪಾದಾಂಬುಜ ಶಾಙ್ಗಯಾದ ವಾಯುನಂದನನೆನಿಸಿ । ಖ್ಯಾತ ದ್ವಾಪರ ಯುಗದಿ ದಾತನಾಗಿ ಚಂದದಿ । ವೀತ ಹರಿಸುಭಕ್ತ ಯವನ ನೋಡಿ । ದ್ಯೂತದಿ ಸೋತು ವನವಾಸವ ಮಾಡಿ ನೀತದಿದುರ್ಜನರನು ಕಡದಾಡಿ । ಈತನೆಗೊಳದಿರೆ ಪುರವನು ಸಾರಿ । ಮಾತುಳ ಹರಿಯೊಡಗೂಡಿ ಪಾತಕಿವರ ದುರ್ನೀತ ಶ್ರೀಗಳಾತ । ಪೂತಸುಯೋಧನ ಮುಖರನು ಮಾರಿ ಗೌತಣವಂ ಮಾಡಿ ತಾಂಡವ ಶ್ರೀಕೃಷ್ಣ । ಪ್ರೀತಿಯ ಪಡದು ಮಧ್ವನಿಕೇತನನಲಿ ಉದ್ಭವಿಸಿ । ಭೀತಿಯರಹಿತ ವೇದ ನಾಥೇಂದ್ರ ಪೂಜಿತ ॥ ೩ ॥

### ೧೦೨. ರಾಗ ಧನಾಸಿ, ಆದಿತಾಳ.

ಕೊಡು ಬೇಗ ದಿವ್ಯಮತಿ ಭಾರತೀಪತಿ ॥ ಪಲ್ಲ ॥ ಮೃಡಹರಿ ಹರಿಯುರೊಡೆಯ ನಂಬಿದೆ ನಿನ್ನ ॥ ತಡವಿಲ್ಲದೆ ಜಗದೊಡೆಯನ ಪಾಡೋ ಭಾಗ್ಯ ॥ ॥ ಅನುಪಲ್ಲ ॥ ರಾಮಚಂದ್ರನ ಪಾದ ತಾಮರಸಭಜಿಸುವಿ । ಕಾಮಿತ ಭಕ್ತರಿಗೆ ಪ್ರೇಮದಿ ಕೊಡಿಸುವಿ ॥ ೧ ॥ ಶ್ಯಾಮ ಸುಂದರ ಕೃಷ್ಣ ಸ್ವಾಮಿ

ಸೇವಕನಾಗಿ । ಭೀಮಾಶಯುನನೆಂಬೊ ನಾಮಾಂಕಿತ ಪ್ರಭೋ ॥ ೨ ॥ ಮುಂಕುಮತಿಯೆಂಬೊ ಶಂಕರನ ಗೆದ್ದು । ವೆಂಕಟವಿಠಲನ ಕಿಂಕರಾನಂದ ತೀರ್ಥ ॥ ೩ ॥ ಶ್ರೀಃ ॥

## ೧೦೩. ರಾಗ ತೋಡಿ. ಆದಿತಾಳ.

ಬಿಡುವೇನೇನಯ್ಯ ಹನುಮ । ಬಿಡುವೇನೇನಯ್ಯ ॥ ಪಲ್ಲ ॥ ಬಿಡುವೆನೇನೋ ಹನುಮ ನಿನ್ನ ಅಡಿಗಳಿಗೆ ಶಿರವ ಕಟ್ಟಿ । ಒಡೆಯನಜ್ಞಾನ ಭಕುತಿಯನೆ । ಕೊಡುವ್ರೋ ತನಕಾ ಸುಮ್ಮನೇನಾ ॥ ಅನುಪಲ್ಲ ॥ ಹಸ್ತವನೀನೆತ್ತಿದರೇನು ಹಾರಗಾಲವನಿತ್ತರೇನು । ಭೃತ್ಯನು ನಿನ್ನವನು ನಾನು ಹಸ್ತಿವರದನ ತೋರೋ ತನಕ ೧ । ಹಲ್ಲು ಮುಡಿಯು ಕಚ್ಚಿದರೇನು । ಬಲ್ಲೆನೊ ನಿನ್ನವನು ನಾನು । ಫುಲ್ಲನಾಭನಲ್ಲಿ ಮನಸು ನಿಲ್ಲಿಸೋ ತನಕ ಸುಮ್ಮನೆ ॥ ೨ ॥ ಡೊಂಕು ಮೋರೆ ಬಾಲವ ತಿದ್ದಿ । ಹುಂಕರಿಸಿದರೆ ಅಂಜುವನಲ್ಲ । ಕಿಂಕರನು ನಿನ್ನವನು ನಾನು । ವೆಂಕಟವಿಠಲನ ತೋರೋ ತನಕ ॥ ೩ ॥ ಶ್ರೀಃ ॥

## ೧೦೪. ರಾಗ ಪೂರ್ವಿ. ಆದಿತಾಳ.

ಆದದ್ದಾಯಿತು ಇನ್ನಾದರು ಒಳ್ಳೆ ಹಾದಿ ಹಿಡಿಯೊ ಪ್ರಾಣಿ । ಈದುರ್ವಿಷಯಂಘೋದರೆ ಯಿಹಪರವೋದವೆಂದು ಕಾಣಿ ಪ್ರಾಣೀ ॥ ಆದದ್ದಾಯಿತು ॥ ಪಲ್ಲಾನುಪಲ್ಲ ॥ ನೆಲಸತಿ ಧನದೊಳಾಗನವರತ । ಹುಳಾಗಿರುವಿಯಲ್ಲೋ । ಸ್ಥಳಾಸ್ಥಳರಿಯದೆ ಕಲಾಪವಾಡಲಘು । ಕೊಳಗಾದಿಯಲ್ಲೋ ॥ ಖಳಾರಿದಿನ ಬಿಂಜಲಾಕೊಳ್ಳೆನೆಂದು ಫಲಾವಾಡಲಿಲ್ಲೋ । ಎಲಾ ಕೇಳುವಂತಿಲಾ ಮಾತ್ರ ನೀ । ಗೆಲಹ ಬಗೆಯಿಲ್ಲೊ ಪ್ರಾಣಿ ॥ ೧ ॥ ಶಿಲಾದಿ ವಿಗ್ರಹ ಫಳಾಸಲ್ಲರಿಯೆಂಬ್ಯಲಾ ಕೇವಲ ಸುಳ್ಳೊ । ಚಲಾ ಪ್ರತಿಮೆಗಳ ಪದಾರ್ಚಿಸದೆ ನೀ ಮಲಾತಿನುವಿಯಲ್ಲೋ । ಫಲಾವಿದು ವಿಧಿ ಕುಲಾಚರಣೆ ಬಿಡೆ ತಳಾತೆಗವರಲ್ಲೋ । ನಳ ಭರತಮುಖ ಇಳಾಶ್ವರಂದದಿ ಭಲಾ ಎನಿಸಿಕೊಳ್ಳೊ ಪ್ರಾಣಿ ॥ ೨ ॥ ಬಲಾದರದಿ ನೀ ತುಲಾಸ್ನಾನ ಮಾಡೆ । ಫಲಾ ಎಂದಿಗಿಲ್ಲೋ ॥ ಬಿಲಾ ಸೇರಿ ತಲೆ ಕೆಳಾಗೆ

ತಪ್ಪಿಸಲು ಫಲಾಲೀಶವಿಲ್ಲೊ । ಕಳಾವಿಡಿದರೆ ನಿಳಾನ ಹರಿಮನೆ ಮೊಳಾ ಯಿರುವದಲ್ಲೋ । ಬಲಾರಿನುತ ಪ್ರಾಣೇಶವಿಠ್ಠಲನ । ಬಲಾ ಫಳಿಸಿ ಕೊಳ್ಳೊ ಪ್ರಾಣಿ ॥ ೩ ॥ ಶ್ರೀಃ ॥

೧೦೫. ರಾಗ ವರಾಳಿ, ಮಟ್ಟೆತಾಳ.

ಯಾತಿಯು ನೀನಾದಪ್ಪು ಕ್ಷಿತಿಯೊಳು ನಾ ಬಲ್ಲೆ । ಪತಿತ ಪಾವನ ಪಾವನಾ । ಪವಮಾನ ॥ ಪಲ್ಲ ॥ ಸತಿ ನಿನ್ನ ನಡತೆಗೆ ಪ್ರತಿಕೂಲಳೆಂತೆಂಬೊ । ಅತಿಶಯುವೆ ಕಾರಣ ಪವಮಾನ ॥ ಅನುಪಲ್ಲ ॥ ಹಗಲುತ್ತರಾಯಣ ವಿಗೆ ಶುಕ್ಲಪಕ್ಷ । ಭಾನುಗಳು ನಿನ್ನಾಶ್ರಯಿಸಿ । ಪವಮಾನ ॥ ಸುಗುಣಿ ಕೃಷ್ಣಪಕ್ಷ ಗಗನೇಂದು ರಾತ್ರಿಯೋಳ್ । ಪಗೆ ದಕ್ಷಿಣಾಯನದಿ । ಪವಮಾನ । ವಿಗಡ ಹೆಂಡತಿ ಮಾರ್ಗ ತೆಗಗಳು ಬ್ಯಾರಿನ್ನು ಒಗತನವ್ಯಾಕೆಂದು । ಪವಮಾನ । ಬಗೆ ಬಗೆ ಫಾಳ್ಯಾಗಿ ಚರಿಸಿ ನೀ ಜಗವೆಲ್ಲ ದುಗುಡ ತನದಲಿ ನಿಂದ್ಯೊ । ಪವಮಾನ ॥ ೧ ॥ ಪತಿಗಳ ಶಯನವು ಪೃಥಕು ಮಾಡಿದರೆ ಸತಿಯರ ದಂಡವೆಂದು । ಪವಮಾನ । ತ್ರೇತೆಯೊಳಂಜನ ಸುತನಾಗಿ ವಾನರ ತತಿಗಧಿಪನೆನಿಸಿ । ಪವಮಾನ ॥ ವ್ರತವಿ ಬ್ರಹ್ಮಚರ್ಯ ಪಥದಿ ರಾಮರ ಪಾದ ಶತಪತ್ರವನು ಪಿಡಿದಿ । ಪವಮಾನ । ಮತಿಸಿ ನುತಿಸಿ ದಿನ ಅತಿಶಯ ಕಳದರು ರತಿಗೊದಗಲಿಲ್ಲೆಂದು । ಪವಮಾನ ॥ ೨ ॥ ಇಷ್ಟನಾದ ಶಿರಿ ಕೃಷ್ಣನ ಪಾದವ ಘಟ್ಯಾಗಿ ನೀ ಪಿಡಿದಿ । ಪವಮಾನ । ನೆಟ್ಟನೆ ಇರುಳೊಳು ನೆರದು ಹಿಡಿಂಬಿಯೊಳ್ ಪುಟ್ಟಿಸಿದ್ಯೊ ಮಗನ । ಪವಮಾನ ॥ ಬಿಟ್ಟರೆನ್ನೊಬ್ಬಳು ಮುಟ್ಟಹಳಿವಳೆಂದು ಗುಟ್ಟು ತಟ್ಟನೆ ತಿಳಿದ್ಯೊ । ಪವಮಾನ । ಅಷ್ಟಾದ ಕಾಲಕ್ಕೂ ಘಟ್ಟಿಮನವೊಳಿರಿ ಬಿಟ್ಟು ಕಲಿಯುಗದಿ । ಪವಮಾನ ॥ ೩ ॥ ಹೆಂಡತಿ ವಶವಲ್ಲ ಬಂಡಾಟ ಸಂಸಾರ ಕೊಂಡೇನು ಮಾಡವೆಂದು । ಪವಮಾನ । ಮುಂಡೆಯುತ್ಯಜಿಸಿ ವ್ಯೈಯೊಳು ಜನಿವಾರ ಚಂಡಿಕೆಯನು ತೊರೆದ್ಯೊ । ಪವಮಾನ ॥ ದಂಡಕಾಷಾಯ ಕಮಂಡಲ ಧರಿಸಿ ಮುತ್ತುಂಡು ಭಿಕ್ಷಾನ್ನವನು । ಪವಮಾನ । ಪಾಂಡಿತ್ಯತನದಿ ಭೂಮಂಡಲ ಚರಿಸುತ್ತ ಪುಂಡರ

ದಂಡಿಸಿದ್ಯೋ । ಪವಮಾನ ॥ ೪ ॥ ಅನ್ನಲ್ಯಾತಕೆ ನಿನ್ನ ಅನ್ನಂತ ಚರಿತವು ನಿನ್ನೊಳಗುಂಟು ಕೇಳೊ ಪವಮಾನ । ಮನ್ನಿಸದಿದ್ದರೆ ಇದನು ಈಗ ನಾನು ಮನೆಮನೆಯೊಳು ದೂರುವೆ । ಪವಮಾನ ॥ ಎನ್ನೊಡೆಯ ಮೋಹನ್ನ ವೆಂಕಟವಿಠಲನ್ನ ಪಾದಾಬ್ಜಂಗಳ । ಪವಮಾನ । ಮನ್ನಿಸಿ ಎನ್ನ ಹೃದ್ವನಜದೊಳು ತೋರೋ ಅನ್ಯಥನಾಡದಲೆ । ಪವಮಾನ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೧೬. ರಾಗ ಬೇಹಾಗ್, ಆದಿತಾಳ.

ಅವನೇ ಧನ್ಯನೆಲಾ ಜಗದೊಳಗಿವನೆ ಮಾನ್ಯನೆಲಾ ॥ ಪಲ್ಲ ॥ ಆವ ಪರಿಯಲಿಂದಾದರೂ ತನ್ನಯ । ಭಾವ ಶುದ್ಧಿಯಲಿ ಭಗವತ್ಪರನಾದವನೇ ಧನ್ಯ ॥ ೧ ॥ ಆತ್ಮೇತರ ಸಂಸ್ಕೃತಿಯೊಳಿದ್ದು । ಸ್ವಾತ್ಮಲಾಭ ಸಿದ್ಧಿಯ ಸಾಧಿಸಿ ಕೊಂಡವನೇ ॥ ೨ ॥ ಶ್ರೀದವಿಠಲನ ಸಾಕ್ಷಾತ್ಕರಿಸಿ । ಸಾಧು ಸೇವ್ಯ ಚಿತ್ಸುಖಮಯನಾದಂಥವನೇ ಧನ್ಯನೆಲಾ ॥ ೩ ॥ ಶ್ರೀಃ ॥

೧೧೭. ರಾಗ ಕಾಂಬೋಧಿ, ಆದಿತಾಳ.

ಭಾರತೀರಮಣ ಸುರವಿನುತ ಚರಣ ಸುಜನಕೃತ ಕರುಣ ॥ ಪಲ್ಲ ॥ ನೀರಜಭವಾಂಡದಿ ಸ । ವಿಾರನಿಂದ ಪರಿಯಾದವರ ಕಾಣದಲೆ ದೇವ ಭಾರಿ ಭಾರಿಗೆ । ಅರಾಧಿಪಬುಧ ಪರಿ । ವಾರದ ಸೇವೆಯನಿತ್ತು । ಪಾರಗಾಣಿಸ್ಯೆಯ ಭೋಗಪುರದೊಳಗಿರುತಿಹ ॥ ೧ ॥ ಎಂದಿನಾ ಸುಕೃತವೋ ಕಾ । ಣೆಂದಿನ ನಿನ್ನ ಪಾದಾರ । ವಿಂದವ ನೋಡಿ ಜ್ಞಾನಾನಂದ ಭರಿತ ॥ ಮಂದನಾದೆನ್ನಾ ಶ್ರೀಮದಾ । ನಂದತೀರ್ಥರ ಮತವ । ಪೊಂದಿಸ ಬೇಕೆಂದು ನಿನ್ನ । ವಂದಿಸಿ ಬೇಡುವೆನ್ಯೆಯ ॥ ೨ ॥ ದೇಶ ದೇಶದಿಂದ ಬಂದ । ಭೂಸುರತತಿಗೆ ಮನ । ದಾಸೆಯ ಪೂರಿಪನೆಂದು । ಪೋಷಿಸಿನಿಂದಲಿ ॥ ಈ ಸಮಯದಿ ಬಂದೆ ಪ್ರಾ । ಣೇಶ ಪೋಷಿಸ್ಯೆಯ ಯೆನ್ನ । ವಾಸವಾದಿ ವಂದ್ಯ ವೆಂಕ । ಟೇಶವಿಠಲನ ದಾಸಾ ॥ ೩ ॥ ಶ್ರೀಃ ॥

### ೧೦೮. ರಾಗ ಮಧ್ಯಮಾವತಿ. ಅಟತಾಳ.

ವಸುಧೆಯೊಳಕಾಣೆ ಈ ಗುರುಗಳಿಗೆ । ಅಸುಪತಿ ಸಮಯದಿಂದೆಸ ಸುವ ಕುಶಲರಿಗೆ ॥ ಪಲ್ಲ ॥ ಶ್ರೀರಮಣನ ಪಾದ ಸಾರಸ ಮಧುಪ । ಸೂರಿಜನವಿನುತ । ಶ್ರೀರಾಘವೇಂದ್ರರಿಗೆ ॥ ೧ ॥ ಬಂದ ಜನರಿಗಾನಂದ ಗರೆವ । ಕುಂದುರಹಿತ ಕರ್ಮಂದಿಗಳೊಡೆಯರಿಗೆ ॥ ೨ ॥ ದಿಟ್ಟ ವೆಂಕಟೇಶವಿಠಲನ ಪದವ । ಮುಟ್ಟಿ ಭಜಿಪರೊಳು ಶ್ರೇಷ್ಠರೆನಿಸುವರಿಗೆ ॥ ೩ ॥

### ೧೦೯. ರಾಗ ಆರ್ಯ, ಅಟತಾಳ.

ಒಂದಾನೊಂದು ದಿನ ನಂದ ಯಶೋದೆಯು । ಕಂದನ ಪ್ರೀತಿಯಿಂದಾಡಿಸಲು ॥ ಅಂದುಗೆ ಅರಳೆಲೆ ಬಿಂದಿಗೆ ಮಾಗಾಯಿ । ಚಂದದಿ ಮಗನ ಮಾತಾಡಿಸಿಲು ॥ ೧ ॥ ಉಂಗುರ ಉಡಿದಾರ ರಂಗು ಮಾಣಿಕವು ನೀ । ಲಾಂಗಗೆ ಇಟ್ಟಳು ಮೋಹದಲ್ಲಿ ॥ ರಂಗನ ಯೆತ್ತಿ ಆಲಿಂಗನೆ ಮಾಡುತ್ತ । ಅಂಗನೆ ಸಹಿತ ಸಮೂಹ(ಮೋಹ)ದಲ್ಲಿ ॥ ೨ ॥ ಅಂಗನೆ ಗೋಪಿಯು ನರಸಿಂಗವಿಠಲಗೆ ಮಂಗಳ ವಾಕ್ಯವು ತಾ ಹರಿಸಿ ॥ ಹಂಗ ವಿಹಂಗ ಕುರಂಗ ಚಾತಕ । ಸಂಗದಿ ಪಕ್ಷಿಗಳ ಕರಿಸಿ ॥ ೩ ॥ ಶ್ರೀಃ ॥

### ೧೧೦. ರಾಗ ಕಾಪಿ, ಆದಿತಾಳ.

ಸಾಕು ಮಾಡಿರವ್ವ ರಂಗನ ಯೇಕೆ ದೂರುವಿರೆ । ಕೃಷ್ಣನ ಯಾಕೆ ದೂರುವಿರೆ ॥ ಪಲ್ಲ ॥ ಬಟ್ಟ ಬಯಲೊಳಗಿಟ್ಟರೆ ರಂಗನು (ತಟ್ಟನೆ) ಕಚ್ಚಲರಿಯನೆ । ರಟ್ಟೆಗಳಿಡಿದು ನಡಸಲು ರಂಗ ಪುಟ್ಟಹೆಜ್ಜೆ ಯಿಡುವನೆ ॥ ಕಟ್ಟದು ಕಂಡರೆ ಅವ್ವಾಯೆಂದು ಚಿಟ್ಟನೆ ಚೀರುವನೆ । ದುಷ್ಟ ಕಟವಿಯರಷ್ಟು ಕಲ್ಪಿಸಿ ಪೆಟ್ಟು ಪೆಟ್ಟಿಗೆ ರಟ್ಟು ಮಾಡುವಿರಿ ॥ ೧ ॥ ಅರಿಯದಂತೆ ನೊರೆ ಹಾಲನೆ ಕುಡಿದು ಕರಕರೆ ಮಾಡುವನೆ । ಕರುಗಳ ಬಿಟ್ಟು ತುರುಗಳ ಮೊಲೆಗಳ ಚುರು ಚುರು ಚೀಪುವನೆ ॥ ನಿರುತ ನಿಮ್ಮನೆಯೊಳು ಯಿರುವ ಕ್ಷೀರದಧಿ ಸುರಿದ ಹ್ಯಾಗೆ ಯಿವನು । ಸರಸಿಜಾಕ್ಷಿಯರು ಪರಿಪರಿಯಿಂದಲಿ ಹರವಿಮಾಡೊದು ತರವೆನವ್ವ ॥ ೨ ॥ ಚಿಕ್ಕ ಚಿಕ್ಕ ಗೋಪ

ಮಕ್ಕಳು ಕೂಡಿ ತಂ । ದುಕ್ಕನಾಡುವಾಗ ಪುಟಕ್ಕೆ ಕಂದುಕ । ಶಿಕ್ಕಿತು
ಯೆನುತಲಿ ತಕ್ಕೊಂಡಳು ಹ್ಯಾಗೆ । ಫಕ್ಕನೆ ಕುಚದೊಳಿಕ್ಕಿಕೊಂಡಳು ।
ಸೊಕ್ಕಷ್ಟವಳಿಗೆ ದಕ್ಕಿತೆನುತ ಬಹು । ಚಕ್ಕಂದಾಡುತ ಫಕ್ಕನೆ ಹಾರಿ
ಕೈಯಿಕ್ಕಿದ ಗಗನಕೆ ॥ ೨ ॥ ಮೂಲಗಂಭವ ಪ್ರೋಲುವಿರಿ ನೀವು । ಭಾಳ
ಬೆಳದಿಂಗ್ಳೀಗೆ । ನೀಲಕುಂತಳೆರೋಲ್ಯಾಡುತ ದಧಿ । ಪಾಲ ಕಡೆಯು
ವಾಗೆ ॥ ಬಾಲಃ ಕೃಷ್ಣಗೆ ಜೋಲುವ ಕುಚಗಳು । ಪ್ಯಾಲಿ ನಿಲುಕಿ
ಧ್ಯಾಗೆ ಹೀಗೆ ॥ ಖೂಳ ಶಟವಿಯರು ಮೂಲವಾಗಿಪ್ಪಂ । ಕೇಳಿ ಕೇಳಿ
ಬ್ಯಾಸರವೇಕವ್ವಾ ॥ ೪ ॥ ಬಲ್ಲೆ ಬಲ್ಲೀಸರಿ ಗೊಲ್ಲತಿಯರು ಕೂಡಿ ।
ಗುಲ್ಲು ಮಾಡುವಿಯರ್ಯಾಕೆ । ಪುಲ್ಲಲೋಚನ ವಲ್ಲಭನಾದರೆ । ಯೆಲ್ಲ್ರೊ
ಮಿದಿಡಬೇಕೆ ॥ ಗೊಲ್ಲಪಳ್ಳಿಯೊಳು ನಿಲ್ಲಿಗೊಡಿರಿ । ಖುಲ್ಲ ತನವು ಸಾಕೆ ।
ಸಲ್ಲದು ಈ ನುಡಿ ವೆಂಕಟವಿಠಲ । ನ್ನಲ್ಲಿಸೊಳಿಟ್ಟು ಹೀರ ಬ್ಯಾಡಿರವ್ವ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೧೧. ರಾಗ ಮುಫ್ಯಮಾವತಿ. ಅಟತಾಳ.

ದಯ ಮಾಡೊ ದಯ ಮಾಡೊ ದಯ ಮಾಡೊ ರಂಗ ॥ ಪಲ್ಲ ॥ ದಯ
ಮಾಡೊ ಕೃಷ್ಣ ದಯ ಮಾಡೊ ನಾನಿನ್ನ ದಾಸನೆಂತೆಂದು ॥ ಅನುಪಲ್ಲ ॥
ಹಲವು ಕಾಲವು ನಿನ್ನ ಹಂಬಲಿವು ಯೆನಗೆ । ಒಲಿದು ಪಾಲಿಸಬೇಕು
ವಾರಿಜನಾಭಾ ॥ ೧ ॥ ಇಹಪರದಲಿ ನೀನೆ ಇಂದಿರೆ ರಮಣಾ । ಭಯ
ವ್ಯಾಕೊ ನೀನಿರಲು ಭಕ್ತಾಭಿಮಾನಾ ॥ ೨ ॥ ಕರಿರಾಜ ವರದನೆ ಕಂದ
ರ್ಪನಯ್ಯಾ । ಗುರು ಮುಪ್ಪುವಿಠಲನೆ ಗುಣಸಾರ್ವ ಭೌಮಾ ॥ ೩ ॥

### ೧೧೨. ರಾಗ ಭೈರವಿ. ಆದಿತಾಳ.

ಇವ ಬಲು ಜಾರನಮ್ಮ ಇರಲಾರೆವಮ್ಮ ॥ ಪಲ್ಲ ॥ ಇವ ಬಲು ಜಾರ
ನಮ್ಮ ನವನೀತ ಚೋರನಮ್ಮ ಮಾಯದಾ ಶೂರನಮ್ಮ ಮೋಹನಾಕಾರ
ನಮ್ಮ ॥ ಅನುಪಲ್ಲ ॥ ಪುಟ್ಟ ಪುಟ್ಟ ಕರಗಳಿಂದ ಬಟ್ಟ ಕುಚಗಳನೆ ಪಿಡಿದು ।
ಅಷ್ಟನಾರೇರ ಒಳಗೆ ಘಟ್ಟಿ ಅಪ್ಪಿದ ನಮ್ಮ ॥ ೧ ॥ ನಾರಿಯರೆಲ್ಲರು ಕೂಡಿ

ನೀರಿಗೆ ಹೋಗುವಾಗ । ದಾರಿಯಡ್ಡವಗಟ್ಟಿ ಬಾರೆಂದು ಕರದನು ॥ ೨ ॥ ಶೃಂಗಾರ ವೆಂಕಟೇಶ ಅಂಗನೆ ಕೇಳೆಲೆ । ಮಂಗಳವಾಗಿ ಭಜಿಸೆ ರಕ್ಷಿಸುವನು ನಮ್ಮ ॥ ೩ ॥ ಶ್ರೀಃ ॥

### ೧೧೪. ರಾಗ ಕಾನಡ, ಆದಿತಾಳ.

ರಘುರಾಮರ ಪಾದವ ಹಿಡೀ ಹಿಡಿ ॥ ಪಲ್ಲ ॥ ಕಾಮ ಕ್ರೋಧ ಮದ ಮತ್ಸರಗಳೆಂಬೊ । ದುರಿತವ ಬ್ಯಾಗನೆ ಹೊಡಿ ಹೊಡಿ ॥ ೧ ॥ ಹೆಣ್ಣು ಹೊನ್ನು ಮಣ್ಣು ಮೂರರಾಶೆಯು ಮಾಡಿದೆ । ಅದರೊಳಗೇನದೆ ಹುಡೀ ಹುಡೀ ॥ ೨ ॥ ಶ್ರೀದವಿಠಲನ ಪಾದ ಸ್ಮರಣೆಯ । ಮರಿಯದೆ ಬೇಗನೆ ನುಡಿ ನುಡಿ ॥ ೩ ॥ ಶ್ರೀಃ ॥

### ೧೧೫. ರಾಗ ಬೇಹಾಗ್, ಆದಿತಾಳ.

ಎಲ್ಯಾಡಿ ಬಂದ್ಯೋ ಮುದ್ದು ರಂಗಯ್ಯ ನೀ । ನೆಲ್ಯಾಡಿ ಬಂದ್ಯೋ ಯೆನ್ನ ಕಣ್ಣಮುಂದಾಡದೆ ॥ ಪಲ್ಲ ॥ ಆಲಯದೊಳಗೆ ನೀನಾಡದೆ । ಬೆಣ್ಣೆ ಪಾಲು ಸಕ್ಕರೆಯ ನೀ ಮೆಲ್ಲದೆ ॥ ಚಿಕ್ಕ ಬಾಲೆಯರೊಳು ನೀನಾಡದೆ । ಬಾಲಯ್ಯ ನೀಯೆನ್ನ ಕಣ್ಣಮುಂದಾಡದೆ ॥ ೧ ॥ ಬಿಟ್ಟ ಮುತ್ತಿನ ಬೊಗಸೆಕಂಗಳು । ಫಣೆಯೊಳಿಟ್ಟ ಕಸ್ತುರಿ ತಿಲಕ ಗಂಧವು ॥ ಅಷ್ಟ ದಿಟ್ಟತನದಲೋಲ್ಯಾಟವು । ಕೃಷ್ಣಯ್ಯ ನೀಯೆನ್ನ ಕಣ್ಣಮುಂದಾಡದೆ ॥ ೨ ॥ ಅಷ್ಟದಿಕ್ಕಿಲಿ ಆರಸಿ ಕಾಣದೆ ಭಾಳ । ದೃಷ್ಟಿಗೆಟ್ಟೆನೊ ನಿನ್ನ ನೋಡದೆ ॥ ಇನ್ನೆಷ್ಟು ಪೇಳಲಿ ಕೇಳಬಾರದೆ । ಶ್ರೀದ । ವಿಟ್ಠಲ ನೀಯೆನ್ನ ಕಣ್ಣಮುಂದಾಡದೆ ॥ ೩ ॥

### ೧೧೬. ರಾಗ ಯಮುನಾಕಲ್ಯಾಣಿ, ಝಾಪ್ ತಾಳ.

ಮುಟ್ಟಗೊಟ್ಟೆ ನೀನಮ್ಮ ಎಲೊ ಎಲೊ ಮುರಾರಿ । ನೀನಮ್ಮ ಘುಮ್ಮಾ । ಎಲೊ ಎಲೊ ॥ ಪಲ್ಲ ॥ ಮಡಿಯನುಟ್ಟು ಮೈತೊಳದು ಬಂದಿಹೆವು । ಕೊಡಬ್ಯಾಡೆಂಜಲುಗಳಾ । ನೀ ಬಹು ಸುಳ್ಳಾ । ಎಲೊ ಎಲೊ ॥ ೧ ॥ ನಿಜ ಪತಿವ್ರತೆಯರು ನಾವಲವೇನೋ । ವ್ರಜವನಿತಾ ಜನ ಜಾರಾ । ನೀ ಬಲು ಚೋರಾ ಗೋರಸ ಚೋರಾ ॥ ೨ ॥ ನೋದ

ರತ್ತಿಯು ಮಗ ನೀನಮಗಲ್ಲ । ಶ್ರೀದವಿಠಲ ಬಿಡು ಹಾದಿ ಸುಮ್ಮನೆ ಹೋದೀ ॥ ३ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೧೬. ರಾಗ ನವರೋಜು. ಆದಿಛಾಪು ತಾಳ.

**ಬಿಡೊ ಬಿಡೊ ಬಡಿವಾರಾ । ಬೀರದಿರು । ನಡಿನಡಿ ಹೋಗೈ ಸಾಕು ॥ ॥ ಪಲ್ಲ ॥ ಗಂಡನುಳ್ಳವನೆಂದರಿಯದೆ ನೀನೆಂಥಾ । ಫುಂಡಾಟಿಕೆ ಯಾರಿಗೆ ಬೇಕೋ ॥ ೧ ॥ ತಕ್ಕ ಬುದ್ಧಿ ಹೇಳುವದಿಲ್ಲವೆ ನಿ । ನ್ನಕ್ಕ ತಂಗಿಯರನೆ ಸೋಕೋ ॥ ೨ ॥ ಶ್ರೀದವಿಟ್ಠಲ ಸುಮ್ಮನೆ ಪೋಗದೆ ನಡು । ಬೀದಿವಳ ಮಾಡದೆ ಹೋಕೋ ॥ ३ ॥** ಶ್ರೀ ॥

೧೧೭. ರಾಗ ತೋಡಿ, ರೂಪಕತಾಳ.

ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ । ದುರಿತ ತರಿದು ಪೊರೆವ ವಿಜಯಗುರುಗಳೆಂಬರಾ ॥ ಪಲ್ಲ ॥ ದಾಸರಾಯನ ದಯವ ಸೂಸಿ ಪಡೆದನ । ದೋಷರಹಿತನ ಸಂತೋಷ ಭರಿತನ ॥ ೧ ॥ ಜ್ಞಾನವಂತನ ಬಲು ನಿದಾನ ಶಾಂತನಾ ॥ ಮಾನ್ಯವಂತನ ಬಲುವದಾನ್ಯದಾತನಾ ॥ ॥ ೨ ॥ ಹರಿಯ ಭಜಿಸುವ ನರಹರಿಯ ಯಜಿಸುವ । ದುರಿತ ತ್ಯಜಿಸುವ ಮನಕೆ ಹರುಷ ಸುರಿಸುವ ॥ ३ ॥ ಮೋದ ಭರಿತನಾ ಪಂಚಭೇದವರಿತನಾ। ಸಾಧು ಚರಿತನಾ ಮನೋವಿಷಾದ ರಹಿತನಾ ॥ ४ ॥ ಇವರ ನಂಬಿದಾ ಜನಕೆ ಭವವಿದೆಂಬುದಾ । ಹವಣೆದಾವದು ನಮ್ಮವರ ಮತವಿದು ॥ ॥ ೫ ॥ ಪಾಪಕೋಟಿಯು ರಾಶಿ ಲೇಪವಾಗದು । ತಾಪತಡೆವನು ಬಲು ದಯಾಪಯೋನಿಧಿ ॥ ೬ ॥ ಕವನ ರೂಪದಿ ಹರಿಯುಸ್ತವನ ಮಾಡಿದಾ । ಭುವನ ಬೇಡಿದಾ ಮಾಧವನ ಕೂಡಿದಾ ॥ ೭ ॥ ರಂಗನೆಂದನುಭವವು ಹಿಂಗಿತೆಂದನು ॥ ಮಂಗಳಾಂಗನು ಅಂತರಂಗ ಕುಣಿವನು ॥ ೮ ॥ ಕಾಶಿನಗರದಲ್ಲಿ ವ್ಯಾಸದೇವನ । ಸೂಸಿ ಭಜಿಸಿದ ಉಲ್ಲಾಸ ತನದಲಿ ॥ ೯ ॥ ಚಿಂತೆ ಬ್ಯಾಡಿರೋ ನಿಶ್ಚಿಂತರಾಗಿರೋ । ಶಾಂತಗುರುಗಳ ಪಾದಯಿಂತು ನಂಬಿರೋ ॥ ೧೦ ॥ ಖೇದವಾಗದು ನಿಮಗೆ ಮೋದವಾಹುದು । ಸಾಧು

ಗುರುಗಳ ದಿವ್ಯ ಪಾದನಂಬಿರೋ ॥ ೧೧ ॥ ತಾಪತಡಿವನೂ ಬಂದ ಪಾಪ ಕಡಿವನೂ । ಶ್ರೀಪತೀಶನ ಪಾದ ಸಮೀಪದಲಿಡುವನಾ ॥ ೧೨ ॥ ಗಂಗೆ ಮಿಂದರೆ ಮಲವು ಹಿಂಗಿತಲ್ಲದೆ । ರಂಗವಲಿಯನು ಇವರ ಸಂಗ ದೊರೆಯದೆ ॥ ೧೩ ॥ ವೇದ ವೋದಲು ಬಹು ವಿವಾದ ಮಾಡಲು । ಹಾದಿಯಾಗದು ಬುಧರ ಪಾದನಂಬದೆ ॥ ೧೪ ॥ ಲೆಕ್ಕವಿಲ್ಲದ ದೇಶತುಕ್ಕಿ ಬಂದರೆ । ದುಃಖವಲ್ಲದೆ ಲೇಶ ಭಕ್ತಿದೊರೆಯದು ॥ ೧೫ ॥ ದಾನಮಾಡಲು ದಿವ್ಯ ಗಾನಪಾಡಲು । ಜ್ಞಾನ ದೊರೆಯದು ಇವರಧೀನವಾಗದೇ ॥ ೧೬ ॥ ಸಿಷ್ಟೆಯಾತಕೆ ಕಂಡ ಕಷ್ಟಯಾತಕೆ । ದಿಟ್ಟ ಗುರುಗಳ ಪಾದ ಮುಟ್ಟಿ ಭಜಿಸಿರೋ ॥ ೧೭ ॥ ಪೂಜೆಮಾಡಲು ಕಂಡ ಗೋಜು ಬೆಳಿಸಲು । ಬೀಜಮಾತಿನ ಫಲ ಸಹಜ ದೊರೆಯದು ॥ ೧೮ ॥ ಜ್ಞಾನವಂತನ ದಯನಿದಾನಪಡೆದರೆ । ಯೇನು ಬಯಸಿದ ಭಾಗ್ಯ ಸಾನುಕೂಲವೋ ॥ ೧ ॥ ಸುರರು ಯೆಲ್ಲರು ಇವರ ಕರವ ಪಿಡಿವರು । ತರಳರಂದದಿ ಹಿಂದೆ ತಿರುಗುತಿಪ್ಪರು ॥ ೨೦ ॥ ಗ್ರಹಗಳೆಲ್ಲವು ಇವಗೆ ಸಹಾಯವಾಗುತ । ಅಹೋರಾತ್ರಿಲಿ ಸುಖದ ನಿವಹ ಕೊಡುವವು ॥ ೨೧ ॥ ವ್ಯಾಧಿಬಾರದು ದೇಹಬಾಧೆ ತಟ್ಟದು । ಆದಿದೇವನ ಸುಪ್ರಸಾದವಾಹುದು ॥ ೨೨ ॥ ಪತಿತಪಾಮರ ಮಂದಮತಿಯು ನಾ ಬಲು ಸ್ತುತಿಸಲಾಪೆನೇ ಇವರ ಅತಿಶಯಂಗಳ ॥ ೨೩ ॥ ಕರುಣದಿಂದಲಿ ಯೆಮ್ಮ ಪೊರೆವನಲ್ಲದೆ ದುರಿತಕೋಟಿಯ ರಾಶಿ ತರಿಮ ದಯದಲಿ ॥ ೨೪ ॥ ಮಂದಮತಿಗಳು ಇವರ ಅಂದವರಿಯದೆ । ನಿಂದ್ಯ ಮಾಡಲು ಭವದ ಬಂಧ ತಪ್ಪದು ॥ ೨೫ ॥ ಉದಯಕಾಲದಿ ಈ ಪದವ ಪಠಿಸಲು । ಮುದಡನಾದರೂ ಜ್ಞಾನ ಉದಯ ವಾಹುದು ॥ ೨೬ ॥ ಇಂದಿರಾಪತಿ ಇವರ ಮುಂದೆ ಕುಣಿವನೂ । ಅಂದವಚನವ ನಿಜಕೆ ತಂದು ಕೊಡುವನು ॥ ೨೭ ॥ ಸಟಿಯಿದಲ್ಲವೋ ವ್ಯಾಸವಿಠಲ ಬಲ್ಲನೋ । ಪಠಿಸ ಬಹುದಿದೂ ಕೇಳಿ ಕುಟಿಲ ರಹಿತರೂ ॥

### ೧೧೮. ರಾಗ ಬೇಹಾಗ್, ರೂಪಕತಾಳ.

**ಸಿದ್ಧ ಗಣಪತೆ ಹೋ ದೇಹಿ ಸನ್ಮತಿ । ಸದಾ ದೇಹಿ ಸನ್ಮತಿ ॥ ಪಲ್ಲ ॥ ಬಾಲಚಂದ್ರ ನೀಲಕಂಠಸೂನು ಸುಜನಾನುಕೂಲ । ಶೈಲಜಾ ಶರೀರ**

ಮಲಜ ಸಿದ್ಧ ॥ ೧ ॥ ಆಖುವಾಹ ಲೋಕಪೂಜ್ಯ ಪಾಶಾಂಕುಶ ಮೋದಕ ಹಸ್ತ ಮಣಿಕಿರೀಟ ಸಿದ್ಧ ॥ ೨ ॥ ಸಿಂಧುರಾಸ್ಯ ಸುಜನ ವೃಂದ ವಸತೆ । ಶ್ರೀನರಹರಿವಿಠಲ ಭಕ್ತ ಭುಕ್ತ ದಾನ ಶೌರ್ಯ ಸಿದ್ಧ ಗಣಪತಿ ॥ ೩ ॥

೧೧೯. ರಾಗ ಮಧ್ಯಮಾವತಿ. ಏಕತಾಳ.

ವೆಂಕಟಾದ್ರಿ ನಿಲಯನ ಪಂಕಜನಾಭನ ತೋರವ್ವ ಲಕುಮಿ ॥ ಪಲ್ಲ ॥ ವಸುದೇವ ದೇವಕಿ ಕಂದಾ ನಮ್ಮ । ಶಶಿಮುಖಿರೊಡನೆ ಆನಂದಾ ಪಶುಗಳ ಕಾಯ್ದ ಗೋವಿಂದಾ । ನಮ್ಮ ಬಿಸಜನಾಭ ಮುಕುಂದ ॥ ॥ ೧ ॥ ಸಾಮಜರಾಜನ ವರದಾ । ಬಲು । ಪ್ರೇಮದಿ ಭಕತರ ಪೊರೆದಾ ॥ ಆ ಮಹಾ ದಿತಿಜರ ತರಿದಾ । ನಿ । ಸ್ಸೀಮ ಮಹಿಮನಾಗಿ ಮೆರದ ನಮ್ಮ ॥ ೨ ॥ ಉರಗ ಗಿರಿಯಲಿಪ್ಪ । ಅಂದು । ಮರುತನ ಹೆಗಲೇರಿ ಬಪ್ಪ ॥ ಶರಣಂಗೊರವಿತ್ತು ತಪ್ಪ । ಶಿರಿ ಮೋಹನ್ನವಿಠಲ ತಿಮ್ಮಪ್ಪ ನಮ್ಮ ॥ ೩ ॥ ಶ್ರೀಃ ।

೧೨೦. ರಾಗ ಕಲ್ಯಾಣಿ. ಆದಿಭಾಷ ತಾಳ.

ನೋಡು ನೋಡೆಂಥಾ ರಘುವೀರ । ದೀನೋದ್ಧಾರ ॥ ಪಲ್ಲ ॥ ತನುಮನ ಧನಗಳ ತನಗೊಪ್ಪಿಸದೆ । ನೆನವ ಮನುಜರಿಗೆ ದೂರಾ ದೂರಾ ॥ ೧ ॥ ಸೇರಿದ ಸುಜನರ ಪೊರುವ ದುರುಳರ । ಬೇರಿಗೆ ರವ ಬಿಸಿ ನೀರಾ ನೀರಾ ॥ ಶ್ರೀದವಿಠಲ ನಿಜ ಪಾದಾಶ್ರಿತರಪ । ರಾಘವ ಮನಸಿಗೆ ತಾರಾ ತಾರಾ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೨೧. ರಾಗ ಬೇಹಾಗ್. ಆದಿತಾಳ.

ಬೀದಿಯೊಳಗೆ ರಂಗ ಕರ ಪಿಡಿದಾ ॥ ಪಲ್ಲ ॥ ವೇದವೇದ್ಯ ಕೃಷ್ಣ ಸಾದರದಿಂದಲಿ ನಡು ॥ ಅನುಪಲ್ಲ ॥ ಜಾರ ಚೋರ ಸುಕುಮಾರ ಶರೀರನು । ನೀರೆ ಬಾರೆಯೆಂದು ಶೀರೆಯನೆಳವುತ್ತ ॥ ೧ ॥ ಕ್ಷೀರ ಮಾರಿ ನಾವು ದಾರಿಯೊಳ್ಬರುತಿರೆ । ಚಾರು ತ್ವರಿತ ಮುತ್ತಿನ್ಹಾರ ಹರಿಯುತ್ತ ॥ ೨ ॥ ನಟ್ಟ ನಡುವೆ ನಮ್ಮ ಬಟ್ಟ ಕುಚಕೆ ಕೈ । ಯಿಟ್ಟು ನೋಡುವ ಶಿರಿ ಕಟ್ಟಿರಾಯನ ಪ್ರಿಯ ॥ ೩ ॥ ಶ್ರೀಃ ॥

### ೧೨೨. ರಾಗ ಅಠಾಣ, ಅಟತಾಳ.

ಪ್ರಾಣನಾಥನೆ ನಿನ್ನ ಕಾಣದೆ ಯೆನ್ನಯ । ಪ್ರಾಣನಿಲ್ಲದು ಬಾ ಬಾ ಬೇಗನೇ ॥ ಪಲ್ಲ ॥ ಲಂಕೆಗಬ್ಧಿಯ ದಾಟಿ ಹೋಗಿ ರಕ್ಕಸರನ । ಬಿಂಕ ಮುರಿದು ದೇವಿಯು ನೋಡಿದೆ ॥ ಪಂಕಜಾಕ್ಷನ ಪಾದ ಪಂಕಜಕೊಂದಿಸಿ । ಶಂಕರೇಶಗೆ ವಾರ್ತೆ ಪೇಳಿದೆ ॥ ೧ ॥ ಭೀಮಾವತಾರದಿ ಕಾಮಿನಿಗಾಗಿ ನಿ । ಭೀಮದೈತ್ಯರನೆಲ್ಲ ನೀಗಿದೆ ॥ ಕಾಮಿತಾರ್ಥವನೀವ ಸ್ವಾಮಿ ಪುರೇಶನೆ । ನೀಮರಹಿತ ಬಲವಂತನೆ ॥ ೨ ॥ ಸರ್ವಜ್ಞನೆಂಬೊ ನಾಮದಿ ನೀ ಪುಟ್ಟಿ । ಸರ್ವದುರ್ವಾದಿಯ ಭಂಗ ನೀ ಮಾಡಿದೆ ॥ ಸರ್ವ ಶಾಸ್ತ್ರಂಗಳೊಳ್ ಶ್ರುತಿಸಿ ನೀ ಸಂತತ । ಸರ್ವಜ್ಞ ನರಹರಿವಿಠಲನ ಪೂಜಿಸಿ ॥ ೩ ॥

### ೧೨೩. ರಾಗ ನಾಟಿಕೊರಂಜಿ. ಆದಿತಾಳ.

ಆರಿವಳ್ ಪೇಳ್ಮದ ಸಾಮಜಗಮನೇ ॥ ಪಲ್ಲ ॥ ಚಂಚಲನಯನೆ ತಾ । ಮಿಂಚಿನೋಲ್ ಹೊಳೆವುತ ॥ ಹಂಚಿಕೆಯಲಿ ಮನ । ವಂಚಿಸುತಿಹಳೇ ॥ ॥ ೧ ॥ ಮಾರನಿವಳ ಮುಖ ವಾರಿಜ ನೋಡೇ । ಶರೀರದ ಸ್ಮೃತಿ ತೋರ ಧಾರೈಸುತಿಹನೇ ॥ ೨ ॥ ದಿಟ್ಟ ವೆಂಕಟೇಶ ವಿಠಲನಾತ್ಮಜ । ತಟ್ಟನೆ ಶರಗಳ ಬಿಟ್ಟು ಬಾಧಿಸನೇ ॥ ೩ ॥ ಶ್ರೀಃ ॥

### ೧೨೪. ರಾಗ ಜುಂಜೂಟಿ, ಏಕತಾಳ.

ಕರುಣಾ ವಾರಿಧೇ ಕಾವುದೇ ಶಾರದೇ ॥ ಪಲ್ಲ ॥ ರಾಮಾಂಗಿಯರ ಶಿರೋಮಣಿ ತವ ಮುಖ ಸೋಮ ಸುಂದರಿಯೇ । ಶಾಮೆಮಿಾರದೇ ॥ ೧ ॥ ಪದ್ಮಭವನ ಮುಖ ಪದ್ಮದೊಳ್ಮಿರೆವಾ । ಪದ್ಮಾನನೆ ನೀನು ಪದ್ಮತೋರದೇ ॥ ೨ ॥ ಈಶವಿನುತ ಕಮಲೇಶ ವಿಠಲನ । ದಾಸರಡಿಯಲವಲೇಶ ಮಿಾರದೇ ॥ ೩ ॥ ಶ್ರೀಃ ॥

### ೧೨೫. ರಾಗ ಪೀಲು, ಆದಿತಾಳ.

ಎಂದಿಗೆ ನಿನ್ನ ಪದ ಕಾಂಬೆ ಸ್ವಾಮಿ । ಎಂದಿಗೆ ನಿನ್ನ ಪದ ಕಾಂಬೆ ಭಕುತಿಯಿಂದ । ಅಂದಿಗೆ ಭವ ಪಾಶ ತುಂಡೆ ॥ ಪಲ್ಲ ॥ ಇಂದಿರೆ ದೇವಿ

ನಿನ್ನ ಪೊಂದಿದ್ದ ಕಾರಣದಂದುಗವನು ಕಾಣಲಿಲ್ಲ ॥ ೧ ॥ ಬೊಮ್ಮನು ನಿನ್ನ ಮಗ ನವಿಲ್ಯಾ ತುತಿಸುವಾಗ । ನೊಮ್ಮಗ ಕುಣಿಕುಣಿದಾಡುವ ಸ್ವಾವಿಯಾ ॥ ೨ ॥ ನಿನ್ನನೆ ವಾಸುದೇವವಿಠಲ ಯೆನ್ನ । ಮನ್ನದಿ ಭಜಿಸೂದು ಬಲ್ಲೆಲಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೬. ರಾಗ ಭೈರವಿ. ಆದಿತಾಳ.

ಮರಿಯದಿರು ಹರಿಯಾ । ಮರೆವರೆ ಮೂರು ಲೋಕದ ಧೊರಿಯಾ ॥ ॥ ಪಲ್ಲ ॥ ಮದಗಜ ಹರಿಯೆಂದು ಕರೆಯಲು ಒದಗಿದಾಕ್ಷಣ ಬಂದು । ಮುದದಿ ನಕ್ರನ ಕೊಂದು ಸಲಹಿದ ಸದ್ಭಕ್ತರ ಬಂಧು ॥ ಹದುಳೆ ಪ್ರಹ್ಲಾದನ ಹೆದರಿಸಿದಸುರನ । ಉದರವ ಬಗೆದಂಥದುಭುತ ಮಹಿಮನ ॥ ೧ ॥ ನಾರಿಯು ತನ್ನ ಕರದಾ ಪಾತ್ರದಿ ಶೀರೆಯ ಮಳೆಗರದಾ ॥ ಕ್ರೂರ ಖಳನ ತರಿದಾ ಪಾಂಡವರಾಜ್ಯದಿ ಪೊರದಾ ॥ ಗಾರಾದಜಮಿಳ ನಾರಗ ಯೆನಲು । ಪಾರುಗಾಣಿಸಿದಪಾರ ಗುಣಸಿಧಿಯ ॥ ೨ ॥ ಒಂದು ಭಾರಿ ಶ್ರೀಶಾ ಯೆಂದರೆ ಬಂದ ದುರಿತ ನಾಶಾ । ಜೆಂದವು ಭವಪಾಶಾ ಆವಗೆಂದೆಂದಿಗಿಲ್ಲ ಕ್ಲೇಶಾ ॥ ತಂದೆ ಕದರುಂಡಲಿಗ ಹನುಮಯ್ಯನೊಡೆಯಗೋ । ವಿಂದನ ನೆನದವರೆಂದಿಗು ಧನ್ಯರು ॥ ೩ ॥ ಶ್ರೀಃ ॥

## ೧೨೭. ರಾಗ ಮಲಹರಿ. ಝುಂಪೆತಾಳ.

ಏನು ಮಾಡಲಿ ಮಗನೆ ಯಾಕೆ ಬೆಳಗಾಯಿತು । ಗೋಕುಲದ ಗೊಲ್ಲತೇರು ಕಾಕುಮಾಡುವರಯ್ಯಾ ॥ ಪಲ್ಲ ॥ ಹಾಲು ಹರವಿಯನೆಲ್ಲ ಒಡೆದು ಬಂದೆಂಬುವರು । ಮೇಲಿದ್ದ ಬೆಣ್ಣೆಯ ಮೆದ್ದನೆಂತೆಂಬರು ॥ ಬಾಲಕನ ನೆತ್ತಿಯನು ಒಡೆದು ಬಂದೆಂಬರು । ಯಂಥಾ ಜಾಲ ಹೆಂಗಸು ಪೆತ್ತಳೆಂಬರ್‍ಯೆ ಕೃಷ್ಣಾ ॥ ೧ ॥ ಉಟ್ಟ ಶೀರೆಯ ಶೆಳದ ದಿಟ್ಟನೆಂತೆಂಬುವರು । ಕಟ್ಟಿದ್ದ ಕರುಗಳನೆ ಬಿಟ್ಟನೆಂಬುವರು ॥ ತೊಟ್ಟಿಲಾ ಶಿಶುವಿಗೆ ಕಲ್ಲನಿಟ್ಟ ಯೆಂಬುವರು ಇಂಥ । ದುಷ್ಟ ಹೆಂಗಸು ಪೆತ್ತಳೆಂತೆಂಬರ್‍ಯೆ ಕೃಷ್ಣ ॥ ೨ ॥ ಶೃಂಗಾರವುಳ್ಳ ಶ್ರೀಹರಿ ಜಾರನೆಂಬುವರು । ಗಂಗೆಯ ನಖದಿಂದ ಪೆತ್ತಂ

ಬರೂ ॥ ಶೃಂಗಪುರದಲಿ ನಿಂತ ಶ್ರೀಮುದ್ರಾಧಿಕರಿಸೆ । ಹಿಂಗದೆ ಯೆನ್ನ ಕೈಹಿಡಿ ಹಿಡಿದು ಬೈವರೂ ॥ ೩ ॥ ಶ್ರೀಃ ॥

## ೧೨೮. ರಾಗ ಆನಂದಭೈರವಿ. ಆದಿತಾಳ.

ಸರಿಯಾರೋ ಯತಿಗೆ ಸಮರ್ಯಾರೋ ॥ ಪಲ್ಲ ॥ ದುರುಳ ವಾದಿಗಳನ್ನ ಮರುಳು ಮಾಡೋರನ್ನ ತರಿದಟ್ಟಿ ಚಂದ್ರಿಕೆ ಗ್ರಂಥವ ರಚಿಸಿ ॥ ಧರಣಿಸುರರ ಪರಿವೃಢರ ಸುನಿಕರಕೆ । ಪರಿಪರಿಯಲಿ ಉಪದೇಶಿಸುತಿಪ್ಪಗೆ ॥ ॥ ೧ ॥ ಕನಕಕಶಿಪುತನಯನ ಘನ ಅಂಶದಿ । ಫಣಿಗಣರಮಣನಾವೇಶದಿ ಪೊಳೆಯುತ ॥ ದಿನದಿನದಲಿ ಹರಿಮನ ದಣಿಸುತಲಿಹ । ಘನ ಮಹಿಮನೆ ಶ್ರೀಯತಿಕುಲತಿಲಕ ॥ ೨ ॥ ಲಂಡವಾದಿಗಳ ಉದ್ದಂಡವಿ ತಂಡಕೆ । ಗಂಡು ಸಿಂಹ ತರ್ಕತಾಂಡವ ಯುಕ್ತಿಯ ॥ ದಂಡುಗಳನೆ ಕಟ್ಟಿಕೊಂಡು ತಾರ್ಕಿಕರ । ಷಂಡಗಳನೆ ಖಂಡಿಸುತಿಹ ಯತಿಯ ॥ ೩ ॥ ಬ್ರಹ್ಮಣ್ಯತೀರ್ಥರ ಕರಕಮಲದಿ ಪುಟ್ಟಿ । ಬ್ರಹ್ಮಜನಕ ನರಸಿಂಹ ಮೂರುತಿಯ ಹೃ । ದ್ಗಹ್ವರದಲಿ ಧ್ಯಾನಿಸುತಿಹ ವ್ಯಾಸರಾಜಾಹ್ವಯದಿಂ ಭುವಿಯೊಳು ಮೆರವಗೇ ॥ ೪ ॥ ಶ್ರೀದವಿಠಲಗತಿ ಪ್ರಿಯರಾದ ಶ್ರೀ । ಪಾದರಾಯರಲಿ ಓದಿ ಗ್ರಂಥಗಳ ॥ ವಾದಿರಾಜ ವಿಜಯೀಂದ್ರ ಪ್ರಮುಖರಿಗೆ । ಆದರದಿಂದ ಪಾಠಹೇಳುತಲಿಪ್ಪಗೇ ॥ ೫ ॥ ಶ್ರೀಃ ॥

## ೧೨೯. ರಾಗ ಬೇಹಾಗ್, ಆದಿತಾಳ.

ತಾರೋ ನಮ್ಮ ಬಂಡಿಯ ಗೋಪಾಲಕೃಷ್ಣ । ತಾರೋ ನಮ್ಮ ಬಂಡಿಯಾ ॥ ಪಲ್ಲ ॥ ಅತ್ತರೇನು ಕಂಗಳಿಂದ ಮುತ್ತುದುರುವದಲ್ಲ । ಮತ್ತ ನಮ್ಮ ವ್ಯಾಲೆ ಬಂಡಿ ಹೊತ್ತಾರೆ ನೀ ಬಿಟ್ಟಯೇನೋ ॥ ೧ ॥ ವಾರಿಜಾಕ್ಷ ನಿನ್ನ ಬಡಿವಾರಾವೇನೋ ಬೆನ್ನ ಮೇಲೆ । ಹಾರಿ ಹತ್ತಿಕೊಂಡು ಭಾರಾ ಹೇರಾದೆ ನಾವು ಬಿಟ್ಟೆವೇನೋ ॥ ೨ ॥ ಕುಟ್ಟು ಹೋಗೆಂದಯ್ರ್ಯಾಕೆ ಕಿಟ್ಟು ಮಾಡುವಿ ಶ್ರೀದ । ವಿಟ್ಠಲ ಕೂಡ್ಯಾಡಿದ ಮೇಲೆ ಬಿಟ್ಟಾರೆ ನಾವು ಬಿಡುವೋರಲ್ಲ ॥ ೩ ॥ ಶ್ರೀಃ ॥

### ೧೩೦. ಶ್ರೀರಾಗ, ತ್ರಿಪುಟತಾಳ.

ಜಗನ್ನಾಥ ದಾಸರಾಯ. ಪಾಲಿಸು ಜೀಯ । ಜಗನ್ನಾಥದಾಸರಾಯ ॥ ಬಗೆಬಗೆಯಲಿ ನಿನಗೆ ಭಗವಂತ ರಂಗ ಒಲಿದಾ ॥ ಪಲ್ಲ ॥ ಇತಿಹಾಸಾ ಪುರಾಣಾ । ಸುಮತಿಯಿಂದಾ । ಯತಿಪ್ರಾಸ ವಿನೋದದಿ ॥ ಅತಿಚಿತ್ರ ಪದವ ರಚಿಸಿ । ಮತಿಯುದಾಯಕ ಗುರುಜನ ॥ ೧ ॥ ಪ್ರತಿಸಿದ್ಧ ಮಧ್ವ ಮತ । ವಾರುಧಿಯನ್ನು ಮಥಿಸಿ ರಚಿಸಿದರು ॥ ನುತಿಸಿ ಹರಿಕಥಾಮೃತ ಸಾರ ತೆಗದು । ಕ್ಷಿತಿಸುರರಿಗೆ ಇತ್ತೆ ॥ ೨ ॥ ವಿಜಯ ಹಯಗ್ರೀವಾ । ಕಂಜ ಪಾದವ । ಭಜಿಸುವ ವಾದಿರಾಜಾ ॥ ನಿಜಕೋಶವನುಸರಿಸಿ । ರುಜು ಮಾರ್ಗ ತೋರಿ ಮೆರದಾ ॥ ಜಗನ್ನಾಥ ದಾಸರಾಯ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೩೧. ರಾಗ ನಾದನಾಮಕ್ರಿಯ, ಅಟತಾಳ.

ತಂಗಿ ನೋಡಿದೇನೆ ಯಿಂದು ಕಂಗಳ ದಣಿಯ ಗುರು । ರಂಗ ಒಲಿದ ದಾಸರಾಯರಾ । ತಂಗಿ ನೋಡಿದೇನೆ ॥ ಪಲ್ಲ ॥ ಶ್ರೀಪತಿಒಲಿಯಲು ಎಲ್ಲಾ । ಪ್ರಾಪುತ ಯೆಂಬ ಪ್ರಮಾಣ ಈ ಪುರುಷನಲ್ಲಿ ಒಪ್ಪೊದೆ ॥ ಶಾಪಾನುಗ್ರಹ ಸಾಮರ್ಥ್ಯ । ಈ ಪ್ರೌಢವಿಯೊಳು ಸಿತ್ಯ । ಕಾಪಾಡೋನು ನಮ್ಮನು ಯೆಲ್ಲಾ ॥ ೧ ॥ ಶಿಖೆಯೊಳಿದ್ದ ಪೀಯೂಷ । ಸುಖದಿ ಪಿತೃಗಳುಂಬರು । ಅಕಟ ಕಾಣರು ನರರೆಂದು ತಂ ॥ ಪ್ರಕಟಗ್ರಂಥಿ ಶೋಧಿಸಿ । ಯುಕುತಿಯಿಂದ ಹರಿಕಥಾಮೃತ । ಸಕಲರಿಗುಣಿಸಿ ಸಲಹುವರೆ ॥ ೨ ॥ ಕಾಶಿಪ್ರಯಾಗ ವಾರಾ । ಕಾಸಿಯಿಂದಧಿಕ ಹರಿ । ದಾಸರಾಯರಿದ್ದ ಸ್ಥಳವು ತ ॥ ನ್ನಾಶವಾಗುವದಘ ಮನ । ಮೀಸಲಾಗುವ ಶ್ರೀಪ್ರಾ । ಣೇಶವಿಠಲ ಕೈಸೇರುವ ॥ ೩ ॥ ಶ್ರೀಃ ॥

### ೧೩೨. ರಾಗ ಶಂಕರಾಭರಣ. ಆದಿತಾಳ.

ಮಧ್ವೇಶಾರ್ಪಣಮಸ್ತು ಮಹಾಪ್ರಭು ಮಧ್ವೇಶಾರ್ಪಣಮಸ್ತು ॥ ಪಲ್ಲ ॥ ಎದ್ದು ಕುಳಿತು ಮಲಗೆದ್ದು ಮಾಡುವ ಕರ್ಮ ಮಧ್ವೇಶಾರ್ಪಣಮಸ್ತು ।

॥ ಅನುಪಲ್ಲ ॥ ಹುಟ್ಟಿದಾರಭ್ಯದಿ ಅಷ್ಟು ಮಾಡಿದ ಕರ್ಮ । ಮಧ್ವೇಶಾರ್ಪಣಮಸ್ತು । ದುಷ್ಟರಾಡುತಿಹ ಕೆಟ್ಟನುಡಿಗಳು ಮಧ್ವೇಶಾರ್ಪಣಮಸ್ತು ॥ ಮೆಟ್ಟಿ ಹೆಜ್ಜೆಯಿಟ್ಟು ನಾಟ್ಯಾಡುವದು ಮಧ್ವೇಶಾರ್ಪಣಮಸ್ತು । ಸಿಟ್ಟಲಿ ಜನರಿಗೆ ನಿಷ್ಠುರಾಡುವದು ಮಧ್ವೇಶಾರ್ಪಣಮಸ್ತು ॥ ॥ ೧ ॥ ಭಾವೆಯ ಕೂಡ ವಿಲಾಸವಮಾತುಗಳು ಮಧ್ವೇಶಾರ್ಪಣಮಸ್ತು । ಕಾಲಕಾಲದಲಿ ನಾಲಿಗೆ ರುಚಿಗಳು ಮಧ್ವೇಶಾರ್ಪಣಮಸ್ತು ॥ ಬಾಲಕರುಗಳನು ಲಾಲನೆ ಮಾಳ್ಪದು ಮಧ್ವೇಶಾರ್ಪಣಮಸ್ತು । ಶ್ರೀಲಕುಮಿಪತಿ ವಾಲಗ ಮಾಳ್ಪದು ಮಧ್ವೇಶಾರ್ಪಣಮಸ್ತು ॥ ೨ ॥ ನಾಸಿಕದಿಂದ ನಿಶ್ವಾಸ ಬಿಡುವದು ಮಧ್ವೇಶಾರ್ಪಣಮಸ್ತು । ಲೇಸು ದೊರೆಯಲು ತೋಷಪಡುವದು ಮಧ್ವೇಶಾರ್ಪಣಮಸ್ತು ॥ ಬೇಸರದಿಂದಲಿ ಕ್ಲೇಶಮಾಡುವದು ಮಧ್ವೇಶಾರ್ಪಣಮಸ್ತು । ಹೇಸಿ ವಿಷಯಗಳಿಗಾಸೆ ಮಾಡುವದು ಮಧ್ವೇಶಾರ್ಪಣಮಸ್ತು ॥ ೩ ॥ ಬಗೆಬಗೆ ವಸ್ತ್ರಗಳಗಲದೆ ಹೊದಿವುದು ಮಧ್ವೇಶಾರ್ಪಣಮಸ್ತು । ಝುಗಝುಗಿಸುವ ಹೊಸನಗಗಳನಿಡುವದು ಮಧ್ವೇಶಾರ್ಪಣಮಸ್ತು ॥ ಸೊಗಸಿಂದುತ್ತಮರ ಸೇವಿಪದು ಮಧ್ವೇಶಾರ್ಪಣಮಸ್ತು । ಹಗಲಿರುಳಲಿ ಮಾಳ್ಪಗಣಿತ ಕರ್ಮವು ಮಧ್ವೇಶಾರ್ಪಣಮಸ್ತು ॥ ೪ ॥ ರಮಣಿಯರಿಂದಲಿ ರಮಣವ ಮಾಡುವದು ಮಧ್ವೇಶಾರ್ಪಣಮಸ್ತು । ಕ್ರಮದಿಂದಶೇಂದ್ರಿಯ ಕರ್ಮಗಳೆಲ್ಲವು ಮಧ್ವೇಶಾರ್ಪಣಮಸ್ತು ॥ ಭ್ರಮಿಸದೆ ಗುರುಗಳ ಮನ ತೋಷಿಸುವದು ಮಧ್ವೇಶಾರ್ಪಣಮಸ್ತು । ರಮಾಪತಿವಿಠಲನ ಮನದಿ ಧ್ಯಾನಿಪದು ಮಧ್ವೇಶಾರ್ಪಣಮಸ್ತು ॥ ೫ ॥ ಶ್ರೀಃ ॥

೧೩೩. ರಾಗ ಸೌರಾಷ್ಟ್ರ. ಆದಿತಾಳ.

ಆನಂದತೀರ್ಥರೆಂಬೊ ಅರ್ತಿಯ ಪೆಸರುಳ್ಳ । ಗುರು ಮಧ್ವ ಮುನಿರಾಯಾ ॥ ಪಲ್ಲ ॥ ಏನೆಂಬ ನಾನಿನ್ನು ಕರುಣಕ್ಕೆ ಎಣೆಗಾಣೆ । ಗುರು ಮಧ್ವಮುನಿರಾಯಾ ॥ ಅನುಪಲ್ಲ ॥ ಬೇಸರಾದೆ ಸರ್ವರಲ್ಲಿ ಶ್ವಾಸಜಪಂಗಳ ಮಾಡಿ ಗುರು ಮಧ್ವಮುನಿರಾಯಾ । ಶ್ರೀಶ ಗರ್ಪಿಸುತ್ತ ನಿನ್ನ ದಾಸರನ್ನ ಪಾಲಿಸಿದಿ ಗುರು ಮಧ್ವಮುನಿರಾಯಾ ॥ ೧ ॥ ಅಂದು ಹನು

ಮಂತನಾಗಿ ಬಂದು ಸುಗ್ರೀವಗೆ ಗುರುಮಧ್ವಮುನಿರಾಯಾ । ಅಂದ
ವಾದ ಪದವಿತ್ತಾನಂದದಿಂದ ಸಲಹಿದಿ ಗುರು ಮಧ್ವಮುನಿರಾಯಾ ॥ ೨ ॥
ಕುಂತಿಯ ಕುಮಾರನಾಗಿ ಹಂತ ಕೌರವರ ಕೊಂದೆ ಗುರು ಮಧ್ವಮುನಿ
ರಾಯಾ । ಅಂತು ಪುಣ್ಯಂಗಳೆಲ್ಲ ಕಂತುಪಿತಗರ್ಪಿಸಿದೆ ಗುರು ಮಧ್ವಮುನಿ
ರಾಯಾ ॥ ೩ ॥ ಅದ್ವೈತರನ್ನ ಕಾದಿಗೆದ್ದು ನಿನ್ನ ಭಕ್ತರಿಗೆ ಗುರು ಮಧ್ವ
ಮುನಿರಾಯಾ । ಶುದ್ಧತಾತ್ಪರ್ಯ ವಾಕ್ಯ ಪದ್ಧತಿಯ ತಿಳಿಸಿದ್ಯೊ ಗುರು
ಮಧ್ವಮುನಿರಾಯಾ ॥ ೪ ॥ ಗುರು ಪ್ರಾಣೇಶವಿಠಲ ಪರನೆಂದು ಡಂಗು
ರವ ಗುರು ಮಧ್ವಮುನಿರಾಯಾ । ಸಾರಿಸಿ ಸಜ್ಜನರಿಗೆ ಹರಿಯ ಲೋಕ
ತೋರಿಸಿದಿ ಗುರುಮಧ್ವ ಮುನಿರಾಯಾ ॥ ೫ ॥ ಶ್ರೀಃ ॥

### ೧೩೪. ರಾಗ ಪಂತುವರಾಳಿ. ಅಟತಾಳ.

ಕಾಯೊ ಕಾಯೊ ॥ ಪಲ್ಲ ॥ ಕಾಯೊ ಕಾಯೊ ವರ । ವೀಯೊ ವಿಜಯ
ಗುರುರಾಯ । ನೀನಲ್ಲದು । ಪಾಯ ಮತ್ತಿಲ್ಲ ॥ ಅನುಪಲ್ಲ ॥ ತಾಪ
ತ್ರಯ ಬಲು । ದೀಪನವಾಗಿದೆ ॥ ನೀ ಪರಿಪಾಲಿಸ । ದೀ ಪರಿ ಥರವೇ ॥ ೧ ॥
ಪಾಪಗಳೆಣಿಸದೆ । ಪಾವನ ಮಾಳ್ಪುದು ॥ ಶ್ರೀಪತಿ ಪಡದ ಸು । ರಾಪಗ
ದಂತೆ ॥ ೨ ॥ ಸ್ವೀಕರ ಮಾಳ್ಪುದು ನಿ । ರಾಕರಿಸದೆ ಬಲು ॥ ವ್ಯಾಕುಲ
ನಾಗಿಹೆ । ನೀ ಕರುಣದಲಿ ॥ ೩ ॥ ದೂರ ನೀ ನೋಡಲು । ಆರು ಇಲ್ಲವೊ
ಗತಿ ॥ ಕಾರುಣ್ಯದಲಿ ನಿ । ವಾರಿಸೊ ದುರಿತಾ ॥ ೪ ॥ ಒಂದರಿತವನಲ್ಲ ।
ಇಂದಿರೇಶನ ಪಾದ ॥ ದ್ವಂದ್ವವ ತೋರೋ ಹೇ । ತಂದೆ ಕರುಣದಿ ॥ ೫ ॥
ನಿನ್ನಾಳುಗಳೊಳು । ಈ ನರ ಮೂರ್ಖನು ॥ ಏನು ಅರಿಯ ಬಲು । ದೀನ
ನಾಗಿಹನೊ ॥ ೬ ॥ ಆಲಸ್ಯ ತಾಳದು । ಪಾಲಿಸು ವೇಣುಗೋ ॥ ಪಾಲ
ವಿಠಲನ । ಆಳು ಕೃಪಾಳೊ ॥ ೭ ॥ ಶ್ರೀಃ ॥

### ೧೩೫. ರಾಗ ಮಧ್ಯಮಾವತಿ, ಆದಿತಾಳ.

ಮಂತ್ರಾಲಯ ಮಂದಿರಾ ಮಾಂ ಪಾಹಿ ॥ ಪಲ್ಲ ॥ ಮಧ್ವಾಭಿಧಮುನಿ
ಸದ್ವಂಶೋದ್ಭವ । ಅದ್ವೈತಾರಣ್ಯ ಸದ್ವೀತಿಹೋತ್ರಾ ॥ ೧ ॥ ಸುಧೀಂ
ದ್ರ ಯತಿಕರ ಪದುಮೋದ್ಭವ । ಸುಧಿ ಗುರು ರಾಘವೇಂದ್ರ ಕೋವಿದ

ತುಲವರ್ಯ ॥ ೨ ॥ ದಂಡಧರ ಕೋದಂಡ ಪಾಣಿಪದ । ಪುಂಡರೀಕ ಧ್ಯಾನ ತಂಡ ಮತೇಹೀ ॥ ೩ ॥ ಸುರಧೇನು ಕಲ್ಪತರು ವರಚಿಂತಾಮಣಿ ಶರಣಾಗತ ಜನ ಪರಿಪಾಲಕತ್ವಂ ॥ ೪ ॥ ಅಭಿನವ ಜನಾರ್ದನವಿಠಲನ ಪದಯುಗಳ । ಧೇನಿಪ ಮುನಿಕುಲೋತ್ತಂಸಾ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೬. ರಾಗ ಕಾಪಿ. ಅಟತಾಳ.

ನಲ್ಲ ಕೃಷ್ಣನಿಲ್ಲಿ ಬರಲಿಲ್ಲ ಸಖಿ ಫುಲ್ಲಾನನೇ ॥ ಪಲ್ಲ ॥ ಮೆಲ್ಲ ನುಡಿಗಳೆಲ್ಲ ಕೇಳದೆಲ್ಲ್ಯೋ ಪೋದನಲ್ಲ ಚೋರ ॥ ಅನುಪಲ್ಲ ॥ ಹೊತ್ತು ಸರಿ ಕತ್ತಲೆಯೊಳ್ । ಚಿತ್ತಮರ ಘೊತ್ತ ತೀಳಿ ॥ ದೊತ್ತಿ ಕುಚ ಮುತ್ತು ಮುಖ ಗಿತ್ತು ಚೋರನೆತ್ತ ಪೋದ ॥ ೧ ॥ ಹೊಕ್ಕಳಡಿಘಕ್ಕರದಿ । ಯಿಕ್ಕಿ ಘೃತ ಚಿಕ್ಕ ಮರಿ । ಚಿಕ್ಕಬಿಟ್ಟು ನೆಕ್ಕಲೆಂದು । ಅಕ್ಕ ಚೋರ ಶಿಕ್ಕಘೋದ ॥ ೨ ॥ ಈಶ ವನಜಾಸ ವಸು । ಧೀಶ ಮುನಿ ಪೋಷ ಭವ ॥ ತೋಷ ಅಘನಾಶ ಆದಿ । ಶೇಷ ವೆಂಕಟದಾಸನುತ ॥ ೩ ॥ ಶ್ರೀಃ ॥

## ೧೩೭. ರಾಗ ಖಮಾಚ್. ಅಟತಾಳ.

ಅಗಲಿರಲಾರೆ ಬಾ ಪ್ರಾಣಕಾಂತ ॥ ಪಲ್ಲ ॥ ಅಗಲಿರಲಾರೆ ಕೈ । ಮುಗಿದು ಬೇಡುವೆನ್ನೈ । ಬಗೆಬಗೆಯಿಂದಲಿ । ನಿಗಮಗೋಚರ ಕೃಷ್ಣ ॥ ಅನುಪಲ್ಲ ॥ ಕಾಲಲಂದುಗೆ ಗೆಜ್ಜೆ ಚಾರು ಚರಣದಿಂದ । ಬಾಲನಂದದಿ ಹಿಂದೆ ಮುಂದೆ ಲ್ಯಾಡುತ್ತ ಬೇಗ ಬಾರೋ ॥ ೧ ॥ ಅರಳೆಲೆ ಮಾಗಾಯಿ ಯೆರಳೆ ಕಂಗಳ ನೋಟ ಮುಂ । ಗುರುಳು ಫಣಿದು ಪೂಸರವ ತೋರಿಸುವಂತೆ ॥ ೨ ॥ ಉಂಗುರ ಕಟಿಸೂತ್ರ ರಂಗ ಧರಿಸಿ ಚೆಲ್ವ । ಮಂಗಳಗಾತ್ರ ಅನಂಗಪಿತನೆ ಬೇಗ ಬಾರೋ ॥ ೩ ॥ ನೀಲವರ್ಣನೆ ಪೂಮಾಲೆ ಗಂಧವ ಪೂಸಿ । ಲೀಲೆ ತೋರುತ ಶ್ರೀಬಾಲಕೃಷ್ಣನೆ ಬೇಗ ॥ ೪ ॥ ವಿಟಕೋಟಿ ವರ ಯೆನ್ನ ಬಟಕುಚ ಕರದ ಸಂ ॥ ಪುಟದೊಳು ನಿಲಿಸಿಹ ಚಟುಲ ನಿನ್ನಗಲಿರಲಾರೆ ॥ ೫ ॥ ಸುಂದರಾನನ ಸುಮಂದಹಾಸ ಮುಖ । ಅಂದವನೀಡಿ

ಆನಂದವ ತೋರಿಸುವಂತೆ ಬಾರೋ ॥ ೬ ॥ ವಾಮನೋಹರ ಶ್ರೀಭೀಮ ವಿಕ್ರಮ ದೇವ । ಶ್ಯಾಮಸುಂದರ ಕಮಲೇಶವಿಠಲ ಬೇಗ ಬಾರೋ ॥ ೭ ॥

೧೩೮. ರಾಗ ಸಾವೇರಿ. ಆದಿತಾಳ.

ಬಂದಳಾ ದ್ರುಪದನಂದನೆ ಸಖಿಯರ ಸಂದಣಿಯೊಳು । ಸಭೆಗೆ ವಲ್ಲಭಿಲಿ ॥ ಪಲ್ಲ ॥ ಕುಂದಣ ಮಣಿಮಯದಂದಣವೇರಿ ಧಣಂಧಣವಾದುಗಳಿಂದಲಂದದೊಳು ॥ ಅನುಪಲ್ಲ ॥ ಎಡಬಲ ಝುಡಿವ ಮಡದಿಯರ ಗಡಣೆಯಲಿ ಜವ್ವನೆಯರು । ಪಿಡಿದಿಹ ಕಡು ಬೆಡಗಿನ ಬಿಳಿ ಗೊಡೆಗಳ ನೆಳಲಿನಲೀ ॥ ಕೈವಾರದವರ ಗಡಿಬಿಡಿಯು । ಕೈಭಡಿಯು । ಬಿಡುಮುಡಿಯ ಭಟರುಗಳ ಕಡೆಯು ನಡಿಸುತಾ । ನುಡಿಸುತಾ । ಸಂದಣಿ ಬಿಡಿಸುತಾ । ತಡಿಸುತಾ । ದ್ರೌಪದಿ ಕಡೆಗಣ್ಣಿನ ಕುಡಿನೋಟದ ಮಿಂಚಿನ ಪ್ರೊಡವಿಪತಿಗಳೆದೆ ಒಡೆವಪ್ರೊಲು ಸಭೆಯೊಳು ॥ ೧ ॥ ಕ್ಷಿತಿಪತಿಗಳ ಸಂತತ ಸದ್ಭಟರುಗಳ ಮಂಡಲಿಯೊಳಗತಿ ಶೋಭಿತರಾಗಿಹ । ಅತಿರಥ ಮಹಾರಥರುಗಳ ಮನಮೋಹದ ನೋಟದ ಸತಿಯು । ಆರತೀಯು । ಚತುರತೆಯು ನೋಡುವರಿಗೆ ವ್ಯಥೆಯು ಸ್ಥಿತಿಸುತ । ಮಥಿಸುತಾ ಪಿರಿವರಗೆ ಸನ್ನುತಿಸುತಾ ಯಾದವರಿಗೆ । ಅತಿಹಿತನಿಗೆ ತಾ ನಿಜ ಮೋಹಿನಿ ಮೂರುತಿಯಂತೆ ಸಭೆಯೊಳು ॥ ೨ ॥ ಕುಟಿಲಮನದವರ ನಟಿಸುತ ಕುಟೀರಲೀ । ಯಾದವರೊಳು ಕಮಲೇಶವಿಠಲಗೆ ಶಿರ ಬಾಗುತ ತಾ ನಮಿಸುತಲೀ ಶಿರದೊಳು ರಾಜಿಪ । ರಾಕುಟಿಯಾ ಭ್ರುಕುಟಿಯಾಕೆಂಮುಟಿಯು ಘನಜಘನಸ್ಫುಟಿಯಾ ಪಠಿಸುತಾ ಪ್ರಟ್ಟಿಸುತಾ ಅರ್ಜುನಪದ ಘಟಿಸುತಾ । ಭಟಿಸುತಾ । ಭಟರೊಳು ವಿಟಕೋಟಿಗೆ ಸಂಕಟಕರ । ಕಟಕಕಾಂತಿಯೊಳ್ ನಟಿಸುತ ಸಭೆಯೊಳ್ ॥ ೩ ॥ ಶ್ರೀಃ ॥

೧೩೯. ರಾಗ ಯದುಕುಲಕಾಂಬೋಧಿ. ಝಂಪೆತಾಳ.

ಜೋ ಜೋ ಜೋ ಕೃಷ್ಣ ಪರಮಾನಂದ । ನಂದ ಗೋಪಿಯ ಕಂದ ಮುಕುಂದ ॥ ಜೋ ಜೋ ॥ ಪಲ್ಲ ॥ ಪಟ್ಟಾವಳಿಯನುಟ್ಟು ಬಂದು ಸುರರಾಗಾ । ಗಟ್ಟ್ಯಾಗಿ ಕೂಡಿತು ಪುಣ್ಯಾವೇಗಾ ॥ ವಟಪತ್ರ ಶಯನನ ತೂಗಿರೆ

ಈಗ । ನಗಧರ ಭೂಪತಿ ಮಲಗಿದನೀಗಾ ॥ ೧ ॥ ನಾಕೇಶನು ಮಳೆಗಳ ತಾ ಕರೆಯೇ । ಗೋಕುಲವನು ಕಾಯ್ದವರಿಗೆ ಸರಿಯೇ ॥ ಲೋಕದೊಳಗೆ ಇನ್ನು ಇವರಿಗೆ ಸರಿಯೇ । ಏಕಾಂತ ಸರ್ವೋತ್ತಮನೆ ಶ್ರೀಹರಿಯೇ ॥ ೨ ॥ ಆ ಮುನಿ ಸತ್ಯಬೋಧರಾಯರಿಂದ । ಪ್ರೇಮದಲಿ ಪೂಜಿಸಿ ಕೊಳುವದೆ ಚಂದಾ ॥ ಕದುರುಂಡಲಿಗಿ ಹನುಮನಾನಂದ । ಚಂದಾದಲಿ ತೂಗುವೆ ನಿನ್ನ ಗೋವಿಂದಾ ॥ ೩ ॥ ಶ್ರೀಃ ॥

೧೪೦. ರಾಗ ನಾಟಿ ಮುಖಾರಿ. ಝಂಪೆತಾಳ.

ಹನುಮಂತ ನೀ ಮಹಾ ಜಯವಂತನಯ್ಯ । ಅನುಮಾನವಿಲ್ಲ ಆನಂದ ತೀರ್ಥಾರ್ಯ ॥ ಪಲ್ಲ ॥ ರಾಮಸೇವಕನಾಗಿ ರಾವಣನ ಪುರವ ನಿ । ರ್ಧೂಮವನು ಮಾಡಿದಿ ನಿಮಿಷದೊಳಗೆ ॥ ಭೂಮಿಪುತ್ರಿಗೆ ರಾಮ ಮುದ್ರೆಯುಂಗುರವಿತ್ತು । ಪ್ರೇಮ ಕುಶಲವನು ಶ್ರೀರಾಮಗರ್ಪಿಸಿದ್ಯೊ ॥ ॥ ೧ ॥ ಕೃಷ್ಣಾವತಾರದಿ ಭೀಮನಾಗ್ಯವತರಿಸಿ । ದುಷ್ಟ ದೈತ್ಯರನೆಲ್ಲ ಸಂಹರಿಸಿದ್ಯೊ ॥ ದೃಷ್ಟಿ ಹೀನನಾದ ಧೃತರಾಷ್ಟ್ರವಂಶವನು । ಕಷ್ಟವಿಲ್ಲದೆ ಶ್ರೀ ಕೃಷ್ಣನಿಗರ್ಪಿಸಿದ್ಯೊ ॥ ೨ ॥ ಪತಿತ ಸಂಕರನು ತಾ ಮತವೆಲ್ಲ ಕೆಡಿಸಲು । ಮತಿಹೀನರಾದ ಸಜ್ಜನರಿಗೆಲ್ಲ ॥ ಅತಿ ವೇಗದಲ್ಲಿ ಮಧ್ವಯತಿಯಾಗಿ ಅವತರಿಸಿ ಸ । ದ್ಗತಿಯ ತೋರಿದ ಮುಷ್ಟುವಿಠಲನ್ನ ದಾಸಾ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೪೧. ರಾಗ ಮಧ್ಯಮಾವತಿ. ತ್ರಿವುಡೆತಾಳ.

ಎಷ್ಟು ಪೊಗಳಲಿ ನಾನು ಎನ್ನೊಡೆಯ ನಿನ್ನ ವಿ । ಶಿಷ್ಟ ಮಹಿಮೆಗಳ ಸುಜನರಿಗೆ ಬಂದಾ । ಕಷ್ಟ ಕಳುಹುವಿ ನೀನು ಸುರಕಾಮಧೇನು ॥ ವಿಷ್ಣುವೆ ಪರದೈವವೆಂದು ದುಷ್ಟ ರಾಕ್ಷಸರನು ಕೊಂದು । ಸೃಷ್ಟಿಕರ್ತ ಶ್ರೀರಮೇಶನ ಅಷ್ಟು ಭಕತರೊಳ್ ಶ್ರೇಷ್ಠನೆನಿಸಿದೆ ॥ ಪಲ್ಲ ॥ ತಾಯಿ ಯಾಜ್ಞದಿ ಬಂದು ಸೇವೆಗೆ ರಘುಪತಿ । ರಾಯನಲ್ಲಿಗೆ ನಿಂದು ನಿನ್ನಾತ್ಮ ಸುಖವ ಬಯಸಲಿಲ್ಲವೆಂದು ॥ ಕಾಯಬೇಕು ಸುಗ್ರೀವಗೆನುತಲೆ । ತೋಯಜಾಕ್ಷಗೆ ಪೇಳಿ ವಾಲಿಯು । ವಾಯುದಿಂದಲಿ ಕೊಲಿಸಿದಾಕ್ಷಣ

ಸ । ಹಾಯು ಮಾಡಿದ ವಾಯು ತನುಜನೆ ॥ ೧ ॥ ಕಡಲ ಬೇಗನೆ ಹಾರಿ ಶ್ರೀರಾಮರಾ ಮುದದಿಗುಂಗುರ ತೋರಿ । ಅಲ್ಲಿದ್ದ ದೈತ್ಯರ ಹೊಡದೆ ಬಲು ಹೊಂತಕಾರಿ ಮಾಡಿದೆ ಸೂರಿ । ಒಡೆಯನ್ವಾರ್ತೆಯ ಪೇಳಿ । ಶೀಘ್ರವಿ ನಡಿಸಿ ಸೈನ್ಯವ ದಶಮುಖನ ಶಿರ । ಹೊಡಿಸಿದಾಕ್ಷಣ ಲೋಕಮಾತೆಯ ಒಡಗೂಡಿಸಿದೆ ರಾಮಚಂದ್ರಗೆ ॥ ೨ ॥ ಮೂರು ರೂಪವ ತಾಳಿ ಮಹ ಯೋಗ್ಯರುಗಳಿಗೆ ಸಾರತತ್ವ ಪೇಳಿ । ಶರಣ್ಹೊಕ್ಕವರಿಗೆ ಘೋರ ದುರಿತವ ಶೀಳ್ದಿ ಮೊರೆಯನ್ನೆ ಕೇಳ್ದಿ । ಧೀರಕದರುಂಡಲಗಿ ಹನುಮಾ ಸಾರಿದೆನೊ ನಿನ್ನಯ ಚರಣವ । ದೂರ ನೋಡದೆ ಸಲಹೊ ಕರುಣಾ ವಾರುಧಿ ಶ್ರೀ ಮುಖ್ಯಪ್ರಾಣನಾಥನೆ ॥ ೩ ॥ ಶ್ರೀಃ ॥

### ೧೪೨. ರಾಗ ನವವರಕನ್ನಡ. ಮಿಶ್ರಛಾಪುತಾಳ.

ಕಾಡಬ್ಯಾಡೊ ಬೇಡಿಕೊಂಬೆ ಕಾಡಬ್ಯಾಡೋ ॥ ಪಲ್ಲ ॥ ಹೀಗೆ ಮನೆಯೊಳು ಹಿಂಡಿಗಾತನವೇನೋ । ಕೂಗುವೆ ಪೇಳಲಾ ರಂಗ ॥ ೧ ॥ ಹುಡುಗಾ ಬಡಿಯಲಿ ತಡವೇನೊ ನಾನು । ಕಡೆಗೆ ಹಾಗಾದಿಕೊ ರಂಗ ॥ ೨ ॥ ವಿಟ್ಟ ಭಾಗ್ಯನಿಧಿವಿಟ್ಠಲ ನೀನು । ತೊಟ್ಟಿಲೊಳ್ ತಾಳೆಲೊ ರಂಗಾ ॥ ೩ ॥

### ೧೪೩. ರಾಗ ಸಾವೇರಿ. ಅಟತಾಳ.

ಕೇಳಿರೀತನಗಾಧ ಚರಿತೆಯಾ । ಚೆಲ್ವ ಚಾಲಕಾಪುರಲಿದ್ದ ದೊರೆಯಾ । ॥ ಪಲ್ಲ ॥ ಕಾಳಾಹಿವೇಣಿ ದ್ರೌಪದಿಯ ಶಾಲೆ ಶೆಳವುತ । ಖೂಳಸಭೆಯೊಳು ಗಾಳಿಸಿದ ದುರ್ಯೋಧನನ ಕುಲ । ಹಾಳು ಮಾಡಿದ ಬಹಳ ಬಗೆಯಲಿ ॥ ॥ ಅನುಪಲ್ಲ ॥ ಕಟಕೇಲ ಕುರುಕ್ಷೇತ್ರದಲ್ಲಿ ಬಹಳ ಧಟಿತವಾಗೆ ನೆರೆದಿರಲು ಕುಟಿಲದುರಾತ್ಮಸಿದ್ದಲ್ಲಿ ಭೀಮಾರ್ಭಟಿಸುತಲವನ ಕಾಣುತಲಿ । ಕಟಕಟನೆ ಪಲ್ಗಿರಿದು ಅಸುರನ । ಪಟಪಟಗೆ ಕರುಳನ್ನೆ ಹರಿಯುತ । ಪುಟಪುಟಿದು ಹಾರುತಲೆ ರಣದೊಳು ಛಟಿಲಛಟಿಲೆಂದು ಶೀಳಿದ ॥ ೧ ॥ ಗಡಬಡಿಸುತ ಭೀಮನಾಗೆ ಎದ್ದು ನಡೆದನೂ । ತುಡುಗರ ಬಳಿಗೆ ತಡಮಾಡದಲೆ ಬಹು ಬ್ಯಾಗೆ । ದೊಡ್ಡ ಗದಕಿತ್ತು ಪಿಡಿದ ಕೈಯೊಳಗೆ ॥ ಘುಡಿಘುಡಿಸಿ ರೋಷದಲಿ ಅಸುರರ । ಬಡಿಬಡಿದು ಮಕುಟವನೆ ಕಿತ್ತುತಾ ।

ಕಡಿಕಡಿದು ರಥಗಳನೂ ತರಿವುತಾ। ಧಡಲಧಡಲೆಂದು ಕೆಡಹಿದಾ ॥ ೨ ॥ ಪ್ರಾಶರನ ಜನಕ ತಾನೊಂದು ಉಪದೇಶಕೊಟ್ಟನು ಭೀಮಗೊಂದು । ಸ್ಪ್ರೇಷಿ ದುರ್ಯೋಧನನ ಹಿಡಿದು ಕೊಡೆ । ನಾಶವಮಾಡೆಲೊ ಯೆಂದು ನುಡಿದು ॥ ರೋಷದಲಿ ಬೊಬ್ಬಿರಿದು ಅವನಾ । ಕಾಶಗ್ಹೈಯುತ ಭಾವುರಿ ಗಡೆ। ಬೀಸೆ ಬಡಿಯುತ ಕಡಿದ ತೊಡೆಗಳ। ಕೇಶವಾವಿಠಲೇಶನಾಜ್ಞದಿ।೩॥

ಗ೪೪. ರಾಗ ಕರಹರಪ್ರಿಯ, ಅಟತಾಳ.

**ಗೋ**ಪಾಲಕ ಗೋವಿಂದ ಕೇಳಯ್ಯ । ಕಾಪಾಡಲು ಬರಬೇಕು ದ ಪ್ರಾಯ್ಯ ।। ಪಲ್ಲ ॥ ಪರಮ ಹರುಷದಿ ಕರೆಯೆ ನೀ ಬಂದೆ । ಬರಿದೆ ಭಕ್ತ ವತ್ಸಲನೆಂಬ ಬಿರಿದೆ ॥ ೧ ॥ ಕರುಣಿ ನೀನೆಂದು ನಾ ನಂಬಿದೆ ಬಹಳಾ । ಚರಣ ತೋರಿಸದೆ ಠಕ್ಕಿಸಿದೆ ಶ್ರೀಲೋಲಾ ॥ ೨ ॥ ಯಾಕಾಪಾಮರನಲ್ಲಿ ಇಡೆ ನಿನ್ನ ಕರುಣ । ವ್ಯಾಕುಲಗೊಳಲಾರೆ ತೋರಿಸು ಚರಣಾ ॥ ೩ ॥ ಅನ್ನ ಉದಕ ಬಿಟ್ಟು ನೆನವೆ ಪರಾಕೆ । ಬಿನ್ನನಾದವನ ರಕ್ಷಿಸದಿರೆ ಚೋಕೆ ॥ ೪ ॥ ಶರಣನಲ್ಲಿ ವೆಂಕಟೇಶ ಕೃಪೆಯಿರಲಿ। ಮರೆವನಲ್ಲ ಎಂದಿಗು ನೆನಪಿರಲಿ ॥ ೫ ॥ ಶ್ರೀಃ ॥

ಗ೪೫. ರಾಗ ನವರೋಜು ಮಿಂಡಜಾತಿ. ಝಂಪೆತಾಳ.

**ತಾ**ರೆನ್ನ ಹುಂಡಿ ರಂಗ । ತಾರೆನ್ನ ಹುಂಡಿ ॥ ಪಲ್ಲ ॥ ಅತ್ತರೇನೊ ಕಂಗಳಿಂದ ಮುತ್ತುದುರುವದಿಲ್ಲ । ಮತ್ತೆ ನಮ್ಮ ಮೇಲೆ ಹುಂಡಿ ಹೊತ್ತರೆ ನೀ ಬಿಟ್ಟಿಯೇನೋ ॥ ೧ ॥ ವಾರಿಜಾಕ್ಷ ನಿನ್ನ ಬಿಡುವರೆ ಯೇನೋ। ಬೆನ್ನ ಮೇಲೆ। ಹಾರಿ ಹತ್ತಿಕೊಂಡು ಭಾರಕೇರದೆ ನೀ ಬಿಟ್ಟಿಯೇನೋ ॥ ೨ ॥ ತೊಟ್ಟಿಲಹೋಗೆಂದರೆ ಕಿಟ್ಟುಮಾಡುವೆಯೊ ಶ್ರೀದ। ವಿಟ್ಠಲನ್ನ ಕೂಡಾಡದೆ ನೀ ಬಿಟ್ಟರೆ ನಾವು ಬಿಡುವರಲ್ಲ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಗ೪೬. ರಾಗ ಕಾಪಿ. ಮಟ್ಟೆತಾಳ.

**ತಿಲಕದ ಒಲುಮೆ ಮೇಲು ರಾಧೇ ನಿನ್ನ ತಿಲಕದ ಒಲುಮೆ ॥ ಪಲ್ಲ ॥ ತಿಲಕದ ಒಲುಮೆ ಹರಿ ಬಂದ ಒಲುಮೆ । ಘಿಲುಘಿಲುಕು ಗೆಜ್ಜೆ ಕಾಲು**

ರಾಧೇ ನಿನ್ನ ॥ ಅನುಪಲ್ಲ ॥ ಕುಂಕುಮ ಕೆರದು ಹಚ್ಚಿ ವಂಕಿ ಬಾಜು ಬಂದಿಯಿಟ್ಟು। ಪಂಕಜಾಕ್ಷನೆತ್ತಿ ಕೊಂಬೊ ತೋಳು ರಾಧೇ ನಿನ್ನ ॥೧॥ ಉಟ್ಟದು ಪೈಠಣಿ ಶೀರೆ ತೊಟ್ಟದು ಬುಟ್ಟದ ಕುಪ್ಪಸ। ಮುಟ್ಟಿದರೆ ಮಾಸುವದು ಶಾಲು ರಾಧೇ ನಿನ್ನ ॥೨॥ ಕೈಗೆ ಭಂಗಾರ ಬಳೆ ಕಿವಿಗೆ ಪರಚಿನ ವಾಲೆ। ರಂಗಯ್ಯ ಕರದರೆ ನೀಹೋ ಯೆಂಬೋ ರಾಧೇ ನಿನ್ನ ॥೩॥ ಮಂಗಳ ಸೂತ್ರವು ಬೆಳದಿಂಗಳು ಪೋಳವಂತೆ। ತೆಂಗು ಬ್ಯಾಳೆ ಮಣಿ ಯೆಣ್ಣೆ ನೂಲು ರಾಘೇ ನಿನ್ನ ॥೪॥ ಪಿಲ್ಯ ಕಾಲುಂಗುರ ಕಿರುಬಲ್ಯ ಆಣಿಮುಂಟು। ಪ್ರ್ಯಯರ್ಗದಲಿ ಮೆರವ ಗಿಳಿಗಾಲು ರಾಘೇ ನಿನ್ನ ॥೫॥ ಚೌರಿ ರಾಗಟಿಗೊಂಡ್ಯ ಹೆರಳು ಭಂಗಾರವು। ಚಂದಿರ ಪ್ರಪ್ರಿ ಮುತ್ತಿನ ಬೊಟ್ಟು ರಾಘೆ ನಿನ್ನ ॥೬॥ ದಿಟ್ಟ ಹೆಗಲೊಳು ಶ್ರೀದ ವಿಟಲನ್ನ ಯೇರಿ ಕೊಂಡು। ಬಟ್ಟ ಬಯಲೊಳಗೆ ಕೇಳೆ ರಾಘೇ ನಿನ್ನ ॥೭॥

## ೧೪೭. ರಾಗ ಧನಾಸರಿ, ಆದಿತಾಳ.

ಧನ್ಯ ಧನ್ಯ ನಂದಗೋಕುಲ। ನಂದ ವ್ರಜದ ಪೂರ್ವ ಪುಣ್ಯವೇನೋ॥ ಆ ನಂದನಾ ಕಿಶೋರನಾ ನಂದವೇನೋ ॥ ಪಲ್ಲ ॥ ಗೋವಳರೇಯಾ ಮ್ಯಾಳಾನಿವಾಹದಲ್ಲಿ ನಿಂತು ರಂಗ। ಕೋ ಹುಕ್ಕ ಕೋಹೋ ಹವಳ ಹಂಡಿ ಕಾಳಿ ಬಾ॥ ಕೋ ಹುಕ್ಕ ಕೋಹೋ ಧವಳ ಚಿಂಚಿ ಕಪಿಲೆ ಬಾ। ಕೋ ಹುಕ್ಕ ಕೋಹೋ ಗೌರಿ ನೀಲಿ ಮೈರಿ ಬಾ। ಹೀಗೆ ವಿವರಿಸಿ ಕರದು ತೃಣಕವಳವನೀಡುವಾ। ಆವಿನ್ನಾವ ಸಂಚಿತೋ ಪಾವನೆಂತೊ ಪುಲ್ಲಿನಾ ॥೧॥ ಅಮ್ಮ ಯಶೋದೆ ಕಟ್ಟಿದ್ದ ತಮ್ಮನ ಕಲ್ಲಿಯ ಬುತ್ತಿ ಡೋಹಕ್ಕ ಡೋಹೋ ತಮ್ಮ ಬನ್ನಿರಣ್ಣ ಬನ್ನಿ। ಡೋಹಕ್ಕ ಡೋಹೋ ನಮ್ಮ ಬುತ್ತಿ ನಿಮ್ಮ ಬುತ್ತಿ। ಡೋಹಕ್ಕ ಡೋಹೋ ನಿಮ್ಮ ನಿಮ್ಮಪ್ಪಿನ ಕಾಯಿ। ಕಮ್ಮಗೀಹದೆಂದು ಕೊಡುವಾ। ಒಮ್ಮೆ ಕೆಳದು ಮೆಲ್ಲುವೇ॥ ಉತ್ತುಮ್ಮರಾವ ಜೀವರೋ ಧರ್ಮವೋದನೆಂತುಟೋ ॥೨॥ ತುರುವ ಮೇಯಿಸಿ ವ್ರಜಕೆ ಮರಳಿಸಿ ಗೋಪಾಲರೇಯ ಹೈಹೈರಣ್ಣ ತರಬಿ ತಡೆಯಿರೆನ್ನುತ್ತ। ಹೈಹೈರಣ್ಣ ಭರದಿ ಚೆಂಡು ಚಿಮ್ಮುತ। ಹೈಹೈರಣ್ಣ

ಸ್ವರದಿ ವೇಣು ಊದುತ್ತ । ಹೈಹೈ ಯೆಂದು ಗುಡುಗು ಬುಗುಡಿಯಾ
ತುತ್ತಾ । ಧರೆಯು ಮೇಲಿಂಚಾಡುವ ಕರದ ದಂಡಿಗೇರುವ । ತರಳರಾರಾವ
ಭಾಗ್ಯರೋ ಈ ಧರಣಿ ಯಾವ ಮಾನ್ಯಳೋ ॥ ೩ ॥ ಮಾಧವ ಮಂಜು
ಳ ಶಬ್ದ ಊದುವ ಸುಸ್ವರವೇಣು । ನಾದಸ್ವರಲುಬ್ಧರಾದರು ಗೋಪ
ಕನ್ಯೆರು । ನಾದಸ್ವರಲುಬ್ಧವಾದವಾ ಗೋವತ್ಸವು । ನಾದಸ್ವರಲುಬ್ಧ
ವಾದವಲ್ಲಿ ವೃಕ್ಷವೂ । ಆದರಿಪ ನಾರಿಯರಗಾಧ ತಪವಲ್ಲದೆ । ಪಾದಃ
ಪಶುಗಳಿಲ್ಲ ಆ ದೇವರ್ಕಳಲ್ಲವೇ ॥ ೪ ॥ ಒಪ್ಪುವ ಗೋಧೂಳಿ ಮೈಯೊ
ಳಪ್ಪ ಪೊಂದೊಡಿಗೆ ಚೆಲ್ವ ಶ್ಯಾಮಲಾಮಲಾಂಗ । ಉಪ್ಪರಿ ಹತ್ತಿವರು
ಶ್ಯಾಮಲಾಮಲಾಂಗ । ದರ್ಶನಾವ ರಮ್ಯಕ ಶ್ಯಾಮಲಾಮಲಾಂಗ
ಕುಪ್ಪಿನವ ಕರಗಳ ಕ್ಷಿಪ್ರಪಾಲಗರದು ನಂದಗೋ । ಪಾಂಗನೇರಿವ ಸಮು
ಷ್ಟ ಪ್ರಸನ್ನಂಕಟಾಧಿಪನೆಂದು ಕಾಂಬೆವು ॥ ೫ ॥ ಶ್ರೀಃ ।

## ೧೪೨. ರಾಗ ಹರಿಕಲ್ಯಾಣಿ. ಆದಿತಾಳ.

ದಾಶರಥೇ ದಯ ಮಾಡೋ ನಿನ್ನ । ದಾಸರ ದಾಸನ ನೋಡೋ ॥ ಪಲ್ಲ ॥
ನೀರಜಾಕ್ಷ ನಿಜಮಾಯಾ ಮಮತೆ ಸಂ । ಸಾರ ಶರಧಿಯೊಳು ಬಿದ್ದು
ಪಾರಗಾಣದೆ ಪರಿದು ಪೋಗುವೆನು । ತಾರಕ ನೀನೆನಗಿದ್ದು ಹರಿಹರಿ ।
॥ ೧ ॥ ತುಂಬಿದ ಬಂಡಿಗೆ ಮೊರಭಾರವೆ ಯೆನ । ಗಂಬಿಲ್ಲವೆ ನಿನ್ನಲ್ಲಿ ।
ನಂಬಿದ ಭಕ್ತರ ಸಲಹುವ ವಿಶ್ವ ಕು । ಟುಂಬಿಯೆನಿಸಿ ಕೊಳವಲ್ಲಿ ಹರಿ ॥
॥ ೨ ॥ ಬಲ್ಲಿದರೊಳು ಬಡವರಿಗಾಶಯು ನೀ । ಬಲ್ಲೆ ಮತ್ತೆ ಯೆನಗೀಗ ।
ಎಲ್ಲಿದ್ದರು ಶ್ರೀದವಿಠ್ಠಲ ಬಿಡ । ದಲ್ಲೊ ನಿನ್ನವಗೆ ಬೇಗ ॥ ೩ ॥ ಶ್ರೀಃ ॥

## ೧೪೩. ರಾಗ ಪೀಲು. ಆದಿತಾಳ.

ನರ ನಾರಾಯಣ ಪಾಹಿ ಶ್ರೀ । ನರ ನಾರಾಯಣ ಪಾಹಿ । ಪರಮದಯಾ
ನಿಧೆ ಕರುಣಾಕರ ಹರಿ ॥ ಪಲ್ಲ ॥ ಹಂಸಾಂತರ್ಗತನೆಂದು । ಹಂಸರು
ಸ್ತುತಿಸೋರೆಂದು ॥ ಹಂಸಪಾಲಕ ನೀನೆಂದು । ಹಂಸಾಹ್ವನೆ ಶ್ರೀಹಂಸ
ಸುವಂದಿತ ॥ ೧ ॥ ವಸುಕುಲಜಾತಗು ನೀನೆ । ವಸುಸುತ ವೈರಿಯು

ನೀನೆ ॥ ವಸುಧೆಯೊಳ್ ನಿನಗೆಣೆಗಾಣೆ । ವಸುಧಾಧಿಪ ಶ್ರೀಸೀತಾನಾಯಕ ॥ ೨ ॥ ಪಟ್ಟಣದೊಳಗಿರುವಂಥ । ಕಟ್ಟೆರಾಯ ಹನುಮಂತ ॥ ದಿಟ್ಟ ನಿನ್ನ ದಾಸ ಇಂಥ । ಶ್ರೀಪ್ರನೆಂದೆನಿಸೊ ಸದ್ಗುಣವಂತಾ ॥ ೩ ॥

## ೧೫೦. ರಾಗ ಸುರುಟಿ. ಅಟತಾಳ.

ನಾಲಿಗೆಯ ಶ್ರೀನರಹರಿಯನಬಾರದೆ । ಹಿರಿಯರ ಕೂಡೆ ನಿಷ್ಠುರವಾಡಲು । ಹಲ್ಲುವುರಿದುಕೊಂಬುದು ಬಾರದೆ ॥ ಪಲ್ಲ ॥ ದುರುಳರೊಡವೆ ಹಾಳುಹರಟೆ । ಹರಟೆದರೆ । ಕರಕರಿಯನಬಾರದೇ ॥ ೧ ॥ ಸರಸನೆನಿಸಿ ಅಲ್ಪನರರಿಗೆ । ನಿನ್ನ ಗುಣ । ಸೆರೆಕಾಳಿಗೆ ಮಾರಿದೇ ॥ ೨ ॥ ಮಮಕುಲ ದೈವ ಶ್ರೀಕಮಲೇಶ । ವಿಠಲನೆಂ । ದ್ಯಮರಾಯಗೆ ಮಾರಿದೇ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೫೧. ರಾಗ ಆನಂದಭೈರವಿ. ಆದಿತಾಳ.

ನಿನಗ್ಯಾಕೆ ಬಾರದು ಕರುಣ ॥ ಪಲ್ಲ ॥ ನಿನಗ್ಯಾಕೆ ಬಾರದು ಕರುಣ ಶ್ರೀಕರಚರಣ । ಪಾಲಿಸು ಭಾರತೀರಮಣ ॥ ಅನುಪಲ್ಲ ॥ ಶರಣಾಗತರನು ಸಲಹುವ ಬಿರಿದು । ಮೆರವದು ಲೋಕದ ನಿನ್ನ ॥ ೧ ॥ ಘೋರ ಸಂಸಾರದ ವಾರುಧಿಯೊಳು ನಾ । ಚಾರುವರಿವೆ ನೋಡು ಘನ್ನಾ ॥ ೨ ॥ ಈರಣಗಿರಿಯ ಮೂರುತಿ ತನಯನೆ । ಸೇರಿ ಕಟ್ಟೆರಾಯ ನಿನ್ನಾ ॥ ೩ ॥

## ೧೫೨. ರಾಗ ಶಂಕರಾಭರಣ, ಅಟತಾಳ.

ನೋಡಿದ್ಯಾ ಸೀತಮ್ಮ ನೀ ನೋಡಿದ್ಯಾ ॥ ಪಲ್ಲ ॥ ನೋಡಿದ್ಯಾ ಹನುಮ ಸಾರ್ಭಟವ । ಹಾಳು । ಮಾಡಿದ ಕ್ಷಣದಲ್ಲಿ ವನವಾ ॥ ಆಹ ॥ ಝಾಡಿಸಿ ಕಿತ್ತು ಈಡ್ಯಾಡಿ ವೃಕ್ಷಗಳ । ಕೊಂ । ಡಾಡುವ ನಿನ್ನಯ ಕೋಡಗನ್ಪುರುಷವಾ ॥ ಅನುಪಲ್ಲ ॥ ಮಾತೆ ನಿನ್ನಾಜ್ಞೆಯ ಕೊಂಡು । ಆರ । ಭೀತಿಯಿಲ್ಲದೆ ಫಲ ಉಂಡು । ದೈತ್ಯ । ದೂತ ಬರಲು ಭಾರಿ ಹಿಂಡು ॥ ಆಹ ॥ ವಾತಜಾತ ಬಂದ ಪಾತಕಿಗಳನೆಲ್ಲ । ತಾ ತವಕದಿ ಕೊಂದು ಭೂತಳ

ಖಾಕಿದಾ ॥ ೧ ॥ ಸೊಕ್ಕಿ ರಾವಣನೆಂಬ ಗಂಡ । ಮಹ । ಲಕುಮಿಯನ ಕರಕೊಂಡ । ರಾಮ । ರಕ್ಕಸಾಂತಕ ಆಕೆ ಗಂಡ । ಕಪಿ । ಗಿಕ್ಕಿರೆಂದ ಕಮದಂಡ ॥ ಆಹ ॥ ಮಿಕ್ಕ ಖಳರು ಕೂಡಿ ಲೆಕ್ಕಿಸಿ ಮಾತಾಡಿ । ಸಿಕ್ಕರೆ ಬಿಡೆನೆಂದು ದಿಕ್ಕುಪಾಲಾದಾ ॥ ೨ ॥ ಎಷ್ಟೇಳಲವನ ಪ್ರತಾಪ । ನೋಡು । ಸುಟ್ಟಿನೆಂಬ ಲಂಕಾದ್ವೀಪಾ । ಎಂಥ । ಘಟ್ಟಿಗ ನೋಡೆ ನಮ್ಮಪ್ಪ ॥ ಆಹ ॥ ಸೃಷ್ಟೀಶ ಕೇಶವವಿಟ್ಠಲರಾಯನ । ಮುಟ್ಟಿ ಭಜಿಸಲಜ ಪಟ್ಟಾಳೆನೆಂಥೋದಾ ॥ ೩ ॥ ಶ್ರೀಃ ॥

## ೧೫೩. ರಾಗ ಯರಕಲಕಾಂಬೋಧಿ, ಆದಿತಾಳ.

ಪ್ರೊಡ್ಡನೊ ಪೊಡ್ಡೇನೊ ಸೀ ರಾಮರ । ಪಾದದಿ ವಂದನೆ ಮಾಡುತ ॥ ಮೇದಿನಿಯೊಳನಿಲ ವಿ । ನೋದದಿಂದ ಪಾಡುತಲೆ ॥ ಪಲ್ಲ ॥ ಹಾರಿದೆನೊ ಸಾಗರವ । ತೋರಿದೆ ಭಯ ಭಾವ ॥ ಹೀರಿದೆನೊ ರಕ್ಕಸರ । ಸೇರಿದೆ ಚಿತ್ರಕೂಟವಾ ॥ ೧ ॥ ತೊಡಕ ದ್ವಂದ್ವಕ್ಕೆ ಸಿಕ್ಕಿ । ಹುಡುಕಿದೆಲ್ಲ ಕಡೆಯೊಳೀ । ಗಡಕೆ ಹಾರಿ ಶಿಂಶುಪ । ಬುಡಕೆ ದೇವಿಯ ಕಂಡೆ ॥ ೨ ॥ ಬೆಕ್ಕಿನಷ್ಟು ರೂಪನಾಗಿ । ಪೊಕ್ಕ ರಾತ್ರೆ ಲಂಕೆಯೊಳು ॥ ಲೆಕ್ಕಿಸದೆ ಲಂಕಿಣಿಯ । ರಕ್ಕಸರ ಸ್ಥಾನದಲ್ಲಿ ॥ ೩ ॥ ವಂದಿಸಿ ಮುದ್ರಿಕೆಯನಿತ್ತು । ಕೊಂದೆ ಬಹಳ ರಕ್ಕಸರ ॥ ತಂದೆ ಚೂಡರತ್ನ ರಾಮ । ಚಂದ್ರನ ದಯದಿಂದ ॥ ೪ ॥ ಹರಿಯೆ ಸರ್ವೋತ್ತಮನೆಂದು । ಗುರುಮಧ್ವೇಶವಿಠಲ ಶ್ರೀ ॥ ಹರಿಕಟಾಕ್ಷಕೆ ಸೊರ । ಸೊರವಂತೆ ಯಂತ್ರೋದ್ಧಾರಕ ॥ ೪ ॥

## ೧೫೪. ರಾಗ ಆರಭಿ, ಆದಿತಾಳ.

ಬಾರೋ ವೆಂಕಟರಮಣ ಬಾರೊ ನಿನ್ನಯ ಪದಕಮಲ । ತೋರೊ ಪಾವನಮಾಡುವರಿನ್ನಾರೋ ॥ ಪಲ್ಲ ॥ ಮನ್ನಿಸಿ ದಯದಿ ನೀ ಯೆನ್ನ ಕರ ಪಿಡಿಯೊ ಬಾರೋ ॥ ಅನುಪಲ್ಲ ॥ ಶರಣಾಗತ ಭರಣಾ । ದಿವ್ಯ । ಚರಣಾ ವಿಸ್ತರಣಾ ॥ ನೆರೆನಂಬಿದೆ ನಿನ್ನಯ ಪದಕಮಲವ । ತ್ವರಿತದಿಂದ ನಮನ ಸ್ಥಿರ ಪಾಲಿಪುದಕೆ ॥ ೧ ॥ ಹರಿಯೇ ಗಜ ಕರಿಯೇ । ಬಂದ ಧೊರೆಯೇ ॥

ನರರೊಳಗತಿಪಾಮರ ನಾಲ್ವರಿದೆನೋ । ತ್ವರದಿಂದ ಮನ ಸ್ಥಿರ ಪಾಲಿ ಪುದು ॥ ೨ ॥ ಮರುತಾ ನಿನ್ನ ಚರಿತಾ । ಗುಣಭರಿತಾ ವಿಸ್ತರಿತಾ ॥ ಸ್ಥಿರ ಭಾಗ್ಯನಿಧಿವಿಟ್ಠಲನೆ ಹರುಷದಿ । ಮರೆಯದೆ ಭಕತರ ಪೊರೆವ ಕರು ಣಿಯೋ ॥ ೩ ॥ ಶ್ರೀಃ ॥

೧೫೫. ರಾಗ ತಾಳ.

ರಂಗ ಬಾರೊ ಕಂದನೆಂದು ಯಶೋದೆ ಕರದಳು ಮಗನ ಅಂಗಳದೊಳಗೆ ಅತಿಶೃಂಗಾರದಿಂದಾಡುವವನಾ ॥ ಪಲ್ಲ ॥ ನೀಲಮೇಘಶ್ಯಾಮ ಬಾರೋ ಕಾಲಿಗೆ ಕಾಲುಗಡಗ ನೀಡುವೆ । ಬಾಲ ಅಳದಿರೊ ನಿನಗೆ ಹಾಲು ಅನ್ನ ಕೊಡುವೆ ॥ ಲಾಲಿ ಜೋಜೊ ಬಾಲ ಎಂದು ಜೋ ಕಾಲಿ ಯೊಳಗಾಡಿಸುವೇ । ಲೀಲಾ ಮಲತನದ ಬುದ್ಧಿ ಛಲ ಬಿಡೋ ಬಿಡು ನೀನು ನೀನು ॥ ೧ ॥ ಅಚ್ಯುತ ಅನಂತ ಕೃಷ್ಣ ಮುಚುಕುಂದವರದ ಬಾರೋ । ಇಚ್ಛೆಗೆ ಬಂಥಾಂಗೆ ನೀನು ಹೆಚ್ಚಾಗಿ ಹೊರಗಾಡದಿರೋ ॥ ಪಚ್ಚದ ಹರಳು ಪದಕ ನೋಡಿ ಉಚ್ಚಿಕೊಂಡು ಹೋದರು । ಕಚಿಪಿಚಿ ಕೆಸರಾಟ ಗುಚ್ಚುಹುರುಳು ಯೇನು ಯೇನು ॥ ೨ ॥ ತಮ್ಮನಿ ಕರದೊಯ್ಯ ರಾಧೆ ಸುಮ್ಮನೆ ಕರದೊಯ್ಯ ಮನೆಗೆ । ಚಿಮ್ಮುವ ಕಾರಂಜಿ ತೋರಿ ಸಮ್ಮತಿಸುತ ಕೂಸಿಗೆ ॥ ಅಮ್ಮಯೆನೆಪ್ಪ ಕೊಡಲಿ ಚಿನುಮಯ ರೂಪ ನಿಗೆ । ಗುಮ್ಮನ ಅಂಜಿಕೆಗೆ ರಾಮವಿಟ್ಠಲನಂಜನಂಜನು ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೫೬. ರಾಗ ಕೇದಾರ । ಅಸಾವೇರಿ, ಆದಿತಾಳ.

ರಮಾ ಸಮುದ್ರನ ಕುಮಾರಿ ನಿನ್ನಯ ಸಮಾನಯಾರ್ರಮ್ಮ । ಸುಮಾಸ್ತ್ರನಯ್ಯನೆದೆಮ್ಯಾಲೆ ಸತತಾ ಬಹುಮಾನದಲಿ ಮೆರವ ಮಹಾಮಹಿ ಮಳೆ ॥ ಪಲ್ಲ ॥ ಕನಕಮುಕುಟಮಂಡಿತ ಕುಟಿಲಾಲಕಜಾಲೆ । ಶ್ರೀಚಂದನ ಕುಂಕುಮ ಕಸ್ತುರಿ ತಿಲಕಾಂಕಿತ ಫಾಲೆ । ಮಣಿಮಯ ಕುಂಡಲ ಶೋಭಿತ ಕರ್ಣಕಪೋಲೆ । ಸಂಪಿಗೆ ನೆನೆ ನಾಸಾಗ್ರದೊಳೊಗುವ ಮೌಕ್ತಿಕ ಲೋಲೇ । ಮಿನುಗುವ ಮಾಣಿಕಮಣಿಯಧರಪುಟದೊಳಿನಿವರ ವಜ್ರದ।

ಕಣೆಗಳ ರಾಜಿ ದಶನಯುತ ಸ್ಮೇರಾನನ ಶುಭಕಾಂತಿಯು । ವನಜ ಭವನ ಮನೆಗೆ ಮಂಗಳ ಗರಿವಾ ॥ ೧ ॥ ಕೊರಳೊಳು ಪರಿಪರಿ ಪರಿಮಳ ಪುಷ್ಪದ ಮಾಲೆ । ಒಪ್ಪುವ ಕರಿರಾಜನ ಕರದಿರುವಿಕೆ ಕರಗಳ ಲೀಲೆ । ಶರಣಾಗತಜನ ಪರಿಪಾಲನ ರತಶೀಲೆ । ಗಂಡನ ಪರಿರಂಭಣ ಸಾಮ್ರಾಜ್ಯದ ಸುಖದನುಕೂಲೆ ॥ ಕರುಣಿ ಸಮ್ಮತವ ಕರುಣಾಕಟಾಕ್ಷದ ಶಿರಿಯು ಬೆಳಗಿನೋ । ಸ್ಪರಿಚರಿಸುವ ಸುಜನರ ಚರಣಾಂಬುಜ । ಪರಿಮಳದೊಳ್ಮಾನವೆರಗಿಸುವದೆ ಸೌಂದರಿಯು ಶಿಖಾಮಣಿ ॥ ೨ ॥ ರಮಣೀಯ ವಿಮಲ ಕಮಲದಳಾಯತನೇತ್ರೆ । ಚಂಪಕ ಸುಮನದ ಸುವರ್ಣ ಪರಿಮಳ ಸುಂದರಗಾತ್ರೆ । ಕಮಲಭವೇಂದ್ರಾದ್ಯಮರ ಮುನಿಗಣ ಸ್ತೋತ್ರೆ । ಶ್ರೀಕಮಲೇಶವಿಠಲರಾಯನ ಕರುಣಕೆ ಪಾತ್ರೆ ॥ ಭ್ರಮಿಸುವೆನು ಭವದ ತಿಮಿರದೊಳಗಹ । ಮ್ಮಮ ಮುದದಿಂದಲಿ ಸುಮಾರ್ಗವರಿಯದೆ । ವಿಮಲ ದೃಷ್ಟಿಚಂದ್ರಮನವೃತ ಕಿರಣ । ನಮಗೆ ಸಲಿಸೆ ಮಾರಮಣಿ ಮಜ್ಜನನೀ ॥ ೩ ॥ ಶ್ರೀಃ ॥

## ೧೫೭. ರಾಗ ವರಾಳಿ. ಆದಿತಾಳ.

ರಾಯರ ನೋಡಿರೈ ಮಧ್ವರಾಯರ ಪಾಡಿರೈ । ಪಲ್ಲ ॥ ಅಂಜನೆಯಲಿ ಪುಟ್ಟಿ ಅಂಬರಕಡರಿದ ಹರಿಯೋ । ಸಿಂಹನ ಮರಿಯೋ । ಕಂಜಾಕ್ಷಿಯ ಮುದ್ರಿಗೆ ಶರಧಿಯ ಲಂಘಿಸಿದ । ಮಿಗೆ ಸಂಧಿಸಿದಾ ॥ ಅಂಜದೆ ವನವನು ಕೆಡಿಸಿ ಪುರವನು ಸುಟ್ಟ । ತಾ ಬಲು ದಿಟ್ಟ । ಸಂಜೀವನಗಿರಿ ತಂದ ವಾನರರ ಪೊರದಾ । ತಾ ಬಲು ಮೆರದಾ ॥ ೧ ॥ ಕುಂತಿಕುಮಾರನು ಹರುಷದಿಂದ ಮಿಗೆ ಬೆಳದ । ಖಳರನು ತುಳಿದ । ಅಂತರಖಾರುವ ದುಶ್ಶಾಸನ ಶಿರವರಿದ । ಕರುಳನೆ ತರಿದ ॥ ಸಂತಾಪಗಳನು ಕಳದು ಬಂಧುಗಳ ಹೊರದಾ । ತಾ ಬಲು ಮೆರದಾ । ಕಂತುಜನಕ ಶ್ರೀಕೃಷ್ಣನ ಪಾದಕೆ ಬಿದ್ದ । ಕುಮತಿಗಳ ಗೆದ್ದಾ ॥ ೨ ॥ ಮುನಿಕುಲದಲಿ ಉದ್ಭವಿಸಿದ ಧೀಮತನಾದ । ಸನ್ನುತನಾದ । ಅನಿಮಿಷರೊಡೆಯ ಶ್ರೀವೇದವ್ಯಾಸನ ಚರಣ । ಬಿಡದಿಹ ಸ್ಮರಣ ॥ ಕನಸಿಲಿ ತೋರಿದ ಅದ್ವೈತಿಗಳನು

ತರಿದಾ। ಮುಕ್ತಿಯನೊರೆದಾ। ಘನವರ ಕೊಡುತಿಹ ಮುದ್ದುವಿಠಲನ ದಾಸ। ತಾ ಸನ್ಯಾಸ ॥ ೩ ॥ ಶ್ರೀ ॥

೧೫೮. ರಾಗ ಯಮುನಾಕಲ್ಯಾಣ, ಅಟತಾಳ.

ವಂದಿಸುವೆ ಸೇವಿಸುವೆನು ಸರಸ್ವತಿ ತಾಯೆ ॥ ಪಲ್ಲ ॥ ವಾಗಭಿಮಾನಿ ವಿಧೀಜೆ ಬ್ರಹ್ಮಾಣಿ। ಸುಶೌರಿ ತ್ರಾಣಿ ಸುಂದರವಾಣಿ ॥ ೧ ॥ ಸಭೆಯೊಳು ನಾನು ಸಂಭಾಷಿಸುವೆನು। ವಿಧಿಯ ಕಾಮಿನಿ ನಿಮ್ಮ ಭಯ ಪೇಳುವೆನು ॥ ॥ ೨ ॥ ಪಾಡುವೆ ಸ್ತುತಿಯಾ ಬೇಡುವೆ ಮತಿಯಾ। ಉಡುಪಿನ ಕೃಷ್ಣನ ಮೋಹದ ಸೊಸೆಯೆ ॥ ೩ ॥

೧೫೯. ರಾಗ ಮೋಹನ. ಝಂಪೆತಾಳ.

ವಿಜಯರಾಯರ ಚರಣ ನಿಜವಾಗಿ ನಂಬಲು। ಅಜನಪಿತ ತಾನೆ ಒಲಿವಾ ॥ ದ್ವಿಜಕೇತನ ಗುಣವ ವ್ರಜವ ಕೊಂಡಾಡುವ। ಸುಜನ ಮಂದಾರನೀತ ಪ್ರಖ್ಯಾತ ॥ ಪಲ್ಲ ॥ ವಿ ಯೆಂದು ನುಡಿಯಲು ವಿಷಯ ಲಂಪಟ ದೂರ। ಜ ಯೆಂದು ನುಡಿಯಲು ಜನನ ಹಾನಿ ॥ ಯ ಯೆಂದು ಕೊಂಡಾಡೆ ಯಮಭಟರು ಓಡುವರು। ರಾಯನೆಂದೆನಲು ಹರಿ ಕಾವಾ ವರವೀವಾ ॥ ೧ ॥ ಇವರ ಸ್ಮರಣೆಯೇ ಸ್ನಾನ ಇವರ ಸ್ಮರಣೆಯೇ ಧ್ಯಾನ। ಇವರ ಸ್ಮರಣೆಯೇ ಅಮೃತಪಾನಾ ॥ ಇವರ ಸ್ಮರಣೆಯ ಮಾಡೆ ಯುವತಿಗನ್ನಯವಿತ್ತು। ತ್ರಿವಿಕ್ರಮನು ಮುಂದೆ ನಲಿವಾ ವಲಿವಾ ॥ ೨ ॥ ವಾರಣಾಸಿಯಾತ್ರೆ ಮೂರುಭಾರಿ ಮಾಡಿ। ಮಾರಪಿತನೊಲುಮೆಯನು ಪಡೆದು ॥ ಮೂರವತಾರದಾ ಮಧ್ವಮುನಿರಾಯರಾ। ಚಾರುಚರಣ ವನು ಭಜಿಪಾ ಮುನಿಪಾ ॥ ೩ ॥ ಪುರಂದರದಾಸರಾ ಪರಮಾನುಗ್ರಹ ಪಾತ್ರ। ಗುರುವಿಜಯರಾಯನೀತಾ ॥ ಶಿರಿವಿಜಯವಿಟ್ಠಲನ್ನ ಶ್ರೀನಿವಾಸಾರ್ಯರು। ಹರಿಯಾಜ್ಞೆಯಿಂದ ಕೊಟ್ಟರೂ ದಿಟರೂ ॥ ೪ ॥ ದಾನ ಧರ್ಮದಿ ಮಹಾ ಔದಾರ್ಯ ಗುಣಶೌರ್ಯ। ಶ್ರೀನಿವಾಸನ ಪ್ರೇಮ ಕುಮಾರಾ ॥ ಮಾನವಿಸೀಮೆ ಚಿಕನಪರಿನಿವಾಸ ಮೋ। ಹನ್ನವಿಠಲನ ನಿಜದಾಸ ಉಲ್ಲಾಸಾ ॥ ೫ ॥ ಶ್ರೀ ॥

## ೧೬೦. ರಾಗ ಪಂತುವರಾಳಿ. ಆದಿತಾಳ.

ವೆಂಕಟೇಶ ನೀನೆ ಘೋರಿ ಘೋರೆ । ವೆಂಕಟೇಶಾ ಈ । ಸಂಕಟವೆಲ್ಲವ ಪರಿಹರಿಸು ವೆಂಕಟೇಶಾ ॥ ಪಲ್ಲ ॥ ಎತ್ತಿನ ಪೆಸರುಳ್ಳ ಮತ್ತೆ ರಕ್ಕಸ ತನ್ನ । ಕುತ್ತಿಗೆ ತೆಗದಿಡಲುತ್ತುಮ ಗತಿಕೊಟ್ಟೆ । ಘೋರಿ ಘೋರಿ ॥ ೧ ॥ ಅಂಜನೆ ಯೆಂಬುವಳ್ಕಂಜು ಬಿಸಲಿಗೆ । ಅಂಜದೆ ತಪಿಸಲು ಸಂಜೀವನ ಕೊಟ್ಟೆ । ಘೋರಿ ಘೋರಿ ॥ ೨ ॥ ಸಾಸಿರಮುಖವುಳ್ಳ ಶೇಷನಹಂಕಾರ । ಶ್ವಸನನ ಕೈಯಿಂದ ನಾಶಮಾಡಿಸಿದಂಥ । ಘೋರಿ ಘೋರಿ ॥ ೩ ॥ ಮಾಧವ ಮಾದಿಗ ಹಾದಿಯ ಮೆಟ್ಟಲು । ಮೋದದ್ಯುದ್ಧರಿಸಿದ ಮಾಧವ ಸಲಹೆನ್ನ । ಘೋರಿ ಘೋರಿ ॥ ೪ ॥ ಮೇರುಗಿರಿಯ ಮಗಗೀರೆರಡ್ಯುಗದಲಿ । ಮೂರೊಂದು ನಾಮ ಬೀರಿದ ಶ್ರೀನಿಧಿವಿಠಲಾ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬೧. ರಾಗ ಸೌರಾಷ್ಟ್ರ. ಅಟತಾಳ.

ಶರಣು ಶ್ರೀವೈಕುಂಠನಾಯಕ ಶರಣು ಶ್ರೀಪುರುಷೋತ್ತಮಾ । ಶರಣು ಶ್ರೀಧರ ಗರುಡವಾಹನ ಶರಣು ವೆಂಕಟನಾಯಕ ॥ ಪಲ್ಲ ॥ ಪರಮಪದ ಗೋವಿಂದ ಮಾಧವ ಪದ್ಮನಾಭ ಜನಾರ್ದನಾ । ಧರಣೀಧರ ಕರಿವರದ ಮೋಹನ ದೈತ್ಯಹರ ಬಲಿಬಂಧನಾ ॥ ೧ ॥ ಜಲಜನೇತ್ರ ಮುಕುಂದ ಮುರಹರ ಶಂಖಚಕ್ರ ಗದಾಧರಾ । ಜಲಧಿಶಯನ ಉಪೇಂದ್ರ ಅಚ್ಯುತ ಶಾರ್ಙ್ಗಧರ ನಾರಾಯಣಾ ॥ ೨ ॥ ಆದಿಯೋಗ ಮುನೀಂದ್ರವಂದಿತ ಸುರ ಗಣ ಸೇವಿತ । ವೇದವೇದ್ಯ ಅಚಿಂತ್ಯ ಸನ್ನುತ ವೆಂಕಟೇಶ ನಮೋ ನಮೋ ॥ ೩ ॥ ಶ್ರೀಃ ॥

## ೧೬೨. ರಾಗ ಆನಂದಭೈರವಿ, ರೂಪಕತಾಳ.

ಸಂಗಸುಖವ ಬಯಸಿ ಬದುಕಿರೋ । ರಂಗವಲಿದ ಭಾಗವತರ । ಸಂಗ ಸುಖವ ಬಯಸಿ ಬದುಕಿರೋ ॥ ಪಲ್ಲ ॥ ಪುಟ್ಟಿದಾರಭ್ಯ ಪರಮ ವೈಷ್ಣವಾ ಧ್ಯಕ್ಷರೆನಿಸಿ । ಶಿಷ್ಟಸದಾಚಾರದಲ್ಲಿ ನಿಷ್ಠರಾಗಿ ನಿತ್ಯ ಮುದ್ದುಕೃಷ್ಣ

ಕೀರ್ತನೆಯನು ಪಾಡುತಾ । ಮಧ್ವಮತವ ಪುಷ್ಟಿಗೈಸಿ ಖಳರ ಕಾಡುತಾ । ಕಾಮ್ಯಕರ್ಮ ಬಿಟ್ಟು ಭಕ್ತಿಯನ್ನೆ ಮಾಡುತಾ । ಬಂದ ಬಂದ ಲಾಭ ನಷ್ಟ ತುಷ್ಟಿಗಳಿಗೆ ಪಡಂಬಟ್ಟ ಬಗೆಯ ಪೇಳಲೆಷ್ಟು ॥ ೧ ॥ ಭೂತದಯಾ ಶೀಲರಾದನೀತ ಗುರುದ್ವಾರ ಜಗನ್ನಾಥವಿಠಲಾಂಕಿತವನು । ಪ್ರೀತಿ ಯಿಂದ ಪಡದು ಸಂಗೀತ ವೃತ್ತ ಪದ ಸುಳಾದಿಯ ಪೇಳಿ । ಪ್ರೇಮಾತಿ ಶಯದಿ ಮಧುವಿರೋಧಿಯ ಒಲಿಸಿಕೊಂಡ । ಜಾತರಾಗಿ ಜವನ ಬಾಧೆ ಯ ಬಯಲುಮಾಡಿ । ಖ್ಯಾತರಾಗಿಹರು ಪುಸಿಯ ಮಾತಿದಲ್ಲ ವಿಚಾರ ಸಲ್ಲ ॥ ೨ ॥ ಮೇದಿನಿ ಮೇಲುಳ್ಳ ಗಂಗಾದಿತೀರ್ಥಪತಿಗಳಿವರ । ಕಾದು ಕೊಂಡಿಹರು ಬಿಡದೆ । ಸ್ವಾದೆ ರಾಜೇಂದ್ರರ ಪ್ರಸಾದದಿಂದ ಹರಿಕಥಾಮೃತ ಸಾರ ತತ್ವ । ಸಾಧುಜನರಿಗಾಗಿ ಪ್ರಾಕೃತ ಸುಪದ್ಧತಿಯನು । ಸಾದರದಲಿ ಪೇಳಿ ದುಷ್ಕೃತಾ ದೂರ ಮಾಡಿ । ನೋದಿಸುವರಿಗೆಣೆಗಾಣೆಶ್ರೀದವಿಠಲ ನ್ನಾಣೆ ॥ ೩ ॥ ಶ್ರೀಃ ॥

೧೬೩. ರಾಗ ಪಂತುವರಾಳಿ, ಆದಿತಾಳ.

ಹದಿನಾಲ್ಕು ಲೋಕಕೆ ದಾತ ಹರಿ । ಪಾಂಡವರ ಮನೆ ದೂತಾ ॥ ಪಲ್ಲ ॥ ಚತುರಹಸ್ತದಿಂದೆಂಜಲ ತೆಗಿವಾ । ಅತುಳಿತ ಕಟ್ಟನು ಪೊತ್ತು ಬಿಸು ಡುವಾ । ಪೀತವಸನ ನೀಲಂಗದಿ ಸುರಿವಾ । ಹಿತದಿ ಪೀತಾಂಬರ ಪಥ ಸಾರ್ನವ । ಶ್ರಿಸತಿ ವಕ್ಷ ಕೌಸ್ತುಭಕಧಿಕೆಂದರಿವ । ಘೃತ ದಧಿ ಕ್ಷೀರಾದ್ಯ ಮಿತ ಸುರಸವಾ ॥ ಶ್ರೀಹರಿ ಜಿತಕೃತಿಗತಿಶಯ ತಿಳಿದು । ಸತತ ಸದನ ದಲಿ ಕೆಲಸಕೊದಗುವಾ ॥ ೧ ॥ ಧರ್ಮಬೆಳ್ಳಿ ಚಿತ್ತಗಳೊಳಿಡಿವಾ । ಚರ್ಮಕಶದಿ ದಂಡೊಮ್ಮೆ ಧರಿಸುವ ॥ ಕರ್ಮಕಾರನಂದದಿ ಕಾದಿರುವಾ । ನಿರ್ಮಲವಾಗಿ ಕುದುರೆತೊಳ ತರಿವ । ಮರ್ಮವರಿತು ಕವಳೋದಕ ಕೊಡುವ । ಪೆರ್ಮೆಯಿಂದ ರಥಕಟ್ಟ ಸಾರಥ್ಯವ । ಧರ್ಮಾನುಜ ಪ್ರೋರ ಟಾಗ ನಡಿಸುವಾ ॥ ೨ ॥ ಕಾಸುವೀಸ ಸಂಬಳ ತಾ ಬಯಸಾ । ಸಾಸಿರಾ ನಾಮದೊಡೆಯ ಶಿರಿಅರಸ ॥ ದಾಸರಾ ಮನೆಗೆಲಸಕೆ ಬಲು ಹರುಷ । ಸಾಸುವೆಯಷ್ಟಾಯಾಸವ ಬೆರಸಾ । ದೋಷಕರಾರಿ ದೈತ್ಯರಾ ಸಂತ್ರಸಾ । ಭಾಸುರಗುಣ ನಿಲಯ ವೆಂಕಟವಿಠಲೇಶ ಸದಾ ಭಕ್ತರ ಬಳಿ ಸರಸಾ ॥ ೩ ॥

## ೧೬೪. ರಾಗ ಆನಂದಭೈರವಿ, ಅಟತಾಳ.

ಬಾಲನೇನೆ ನಿನ್ನ ಮಗನು । ಗೋಪಾಲಕೃಷ್ಣ । ಬಾಲನೇನೆ ನಿನ್ನ ಮಗನು ॥ ಪಲ್ಲ ॥ ಬಾಲನೇನೆ ನಿನ್ನ ಮಗನು । ಬಾಲಕೇರಾಲಯವ ಪೊಕ್ಕು । ಶೀಲಗೆಡಿಸಿ ಸಾಲದೆ ಗೋ । ಕೂಲವೆಲ್ಲ ಸೂರೆಮಾಡಿದ ॥ ॥ ಅನುಪಲ್ಲ ॥ ಕಾಲುಯಿಲ್ಲದೆ ನಡಿವನೀತ । ಮೇಲುಗಿರಿಯು ಬೆನ್ನಿಲ್ಹೊತ್ತ । ಮೂಲಬೇರು ಮೆಲ್ಲುವಾತ । ಜ್ವಾಲರೂಪ ಸ್ಥೂಲಕಾಯ ॥ ಬಾಲನಾಗಿ ಭೂಮಿ ಬೇಡಿದ । ಹಾಲು ಕುಡಿಸಿದ ತಾಯ । ತಲೆಯ ಎರವು ಮಾಡಿದ । ವಲ್ಕಾಲನುಟ್ಟು ಅಡವಿಯಾಲಯವ ಮಾಡಿ ತಿರುಗಿದ । ಶ್ರೀರಾಮಚಂದ್ರ । ನೀಲವರ್ಣ ನಿಗಮಗೋಚರ ಮೇಲುಪುರದ । ಸೋಲುಮುಡಿವ ಬಾಲೇರಪ್ಪಿ ಮಾಡೀ ಕಾಲದಲ್ಲಿ ಕಲ್ಕಿಯಾದ ॥ ೧ ॥ ಮಡುವಿನಲ್ಲಿ ಅಡಗಿಯಿರುವ । ಪೊಡವಿ ಗುಡ್ಡೆ ಪೊತ್ತು ಮೆರವ । ಅಡವಿಯಲ್ಲಿ ಆಡುತಿರುವ ॥ ಕಡುಕ್ರೂರ ಹಿಡಿದ ಹಟವ । ಹುಡುಗನಾಗಿ ಪೊಡವಿ ಕೇಳ್ದನೆ । ಕೊಡಲಿಯ ಪಿಡಿದು ಕಡಿದು ಕ್ಷತ್ರಿಯ ಕುಲವ ತರಿದನೇ । ಆ ರಾವಣಾದಿ ಪಡೆಯನೆಲ್ಲ ಸಂಹರಿಸಿದನೇ । ಶ್ರೀರಾಮಚಂದ್ರ । ದುಡುಕುಮಾಡಿ ಗಡಿಗೆಪಾಲ । ಕುಡಿದು ಕಡಹದಲ್ಲಿ ಅಡಗಿ । ಬಿಡದೆ ತ್ರಿಪುರರ ವ್ರತವ ಕೆಡಿಸಿ । ಪಿಡಿದು ತೇಜಿ ನಡಿಸಿದಾತನು ॥ ೨ ॥ ನೀರ ಪೊಕ್ಕು ವೇದ ತಂದು । ಭಾರ ಪೊತ್ತು ಬೆನ್ನಿಲಿಟ್ಟು । ಕೋರೆಹಲ್ಲು ತೋರುತಿರುವ । ಕ್ರೂರವಾದ ಅಪಾರಮಹಿಮ ॥ ಮೂರುಪಾದ ಭೂಮಿ ಬೇಡಿದ । ವಿಪ್ರರ ಕರಿಸಿ । ಧಾರುಣಿಯನು ದಾನಮಾಡಿದ । ಪರ್ವತವ ತಂದು । ಶರಧಿಯಲ್ಲಿ ಪಾತಿಕಟ್ಟಿದ । ಶ್ರೀರಾಮಚಂದ್ರ । ಜಾರಚೋರ ಮಾರನಯ್ಯ । ನಾರ್ಯರಪ್ಪಿ ಮರುಳು ಮಾಡಿ । ವಾರಿಜಾಕ್ಷ ಹಯವದನ್ನ ಏರಿ ಕುದುರೆ ವಯ್ಯಾರ ಮಾಡಿದ ॥ ೩ ॥ ಶ್ರೀಃ ॥

## ೧೬೫. ರಾಗ ಮಾಂಜಿ. ಆದಿತಾಳ.

ಗಣಪತೇ ಯೆನ್ನ ಪಾಲಿಸೋ ಗೌರೀತನಯಾ ॥ ಪಲ್ಲ ॥ ಗುಣಗಣನಿಲಯ ಶ್ರೀವೇಣುಗೋಪಾಲನ । ಪಾದಪದ್ಮದಿ ಮನ ಭೇದಿಸದಂತೆ

ಕೊಟ್ಟು ॥ ಅನುಪಲ್ಲ ॥ ಪಾರ್ವತಿನಂದನ ಪರಮಸುಂದರವದನ । ಶರ್ವಾದಿ ಸುರರಿಗೆ ಶರಣೆಂಬ ಭಕ್ತಿ ಕೊಟ್ಟು ॥ ೧ ॥ ಆದಿಪೂಜಿತ ನೀನು ನೋದ ಭಕ್ತರಿಗಿತ್ತು ಮಾಧವನಲ್ಲಿ ಮನ ಭೇದಿಸದಂತೆ ಕೊಟ್ಟು ॥ ೨ ॥ ಪಂಕಜನಯನ ಶ್ರೀವೆಂಕಟೇಶವಿಠಲನ್ನ । ಕಿಂಕರರೊಳು ಶ್ರೇಷ್ಠ ಶಂಕರ ತನಯನೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೭೬. ರಾಗ ಮೋಹನ. ಆದಿತಾಳ.

ಶಿವನೇ ನಾ ನಿನ್ನ ಸೇವಕನಯ್ಯ । ಕರುಣದಿ ಪಿಡಿ ಕೈಯ । ಶಿರಿಧರ ನರಮೈಯ ॥ ಪಲ್ಲ ॥ ಭವಮೋಚಕ ಭಾಗವತ ಶಾಸ್ತ್ರವನು । ಅವನೀಶಗೆ ಪೇಳ್ದವ ನೀನಲ್ಲವೇ ॥ ಅನುಪಲ್ಲ ॥ ವೈಕಾರಿಕ ತೈಜಸ ತಾಮಸವೆಂಬ । ತ್ರಿತತ್ವಗಳಿಂಬ ನಾಕಾರಿ ಶಾರ್ವರಿ ಧವಧರ ಸಾಂಬ । ಸುರಪಾದ್ಯರ ಬಿಂಬ ॥ ವೈಕಲ್ಯಾಸ್ಪದವ ಕಳದೊಮ್ಮೆಗೆ । ವೈಕುಂಠಕ್ಕೆ ಕರದೊಯ್ಯ ಕರಿಗೊರಳ ॥ ೧ ॥ ಮೃತ್ಯುಂಜಯ ಮುಪ್ಪುರಹರ ಮಹದೇವ । ದೇವರ್ಕಳ ಕಾವ । ಸ್ತುತ್ಯಾದ್ರಿಜ ದಿತಿಜವನ ದಾವ । ದುರಿತಾಂಬುಧಿ ನಾವ ॥ ಕೃತ್ತಿವಾಸ ಯೆನ್ನತ್ಯಪರಾಧಗ । ಳೆತ್ತೆಣಿಸದೆ ಕೃತಕೃತ್ಯನ ಮಾಡೈ ॥ ೨ ॥ ಗಂಗಾಧರ ಷಣ್ಮುಖ ಗಣಪರ ತಾತ । ತ್ರೈಲೋಕ ತ್ರಾತ । ಲಿಂಗಾಹ್ವಯ ತಾವಕ ಹರ ನಿರ್ಭೀತ । ಭುವನಾಧಿನಾಥ ॥ ತುಂಗ ಮಹಿಮ ನಿಸ್ಸಂಗ ಹರಿಯ ಪ್ರೀತಿ । ಯಂಗ ಡಮರು ಶೂಲಾಂಗ ಪಿಡಿದಿಹ ॥ ೩ ॥ ಪಂಚಾನನ ಪನ್ನಗಭೂಷಣ ಭೀಮ । ಭುವನಾಭಿರಾಮ । ಸಂಚಿಂತನ ಮಾಡುವ ಸಂತತ ನೇಮ । ಶ್ರೀರಾಮನಾಮ ॥ ಪಂಚಶರಾರಿ ವಿರಿಂಚಿಕುವರ ನಿ । ಷ್ಕಿಂಚನರೊಡೆಯನ ಮಂಚ ಪದಾರ್ಹನೇ ॥ ॥ ೪ ॥ ಸ್ಫಟಿಕಾಭ ಕಪಾಲಿಕಾಮಿತ ಫಲದಾ । ಫಲ್ಗುನಸಖ ಶ್ರೀದ । ವಿಟ್ಠಲ ವಿತ್ತಪಮಿತ್ರ ದ್ವಿರದ । ಚರ್ಮಾಂಬರನಾದ ॥ ಕುಟಿಲರ ಹಿತ ಧೂರ್ಜಟಿ ವೃಷಭಧ್ವಜ । ನಿಟಿಲನಯನ ಸಂಕಟವ ನಿವಾರಿಸು ॥ ೬ ॥ ಶ್ರೀಃ ॥

## ೧೬೭. ರಾಗ ಸುರುಟಿ. ಆದಿತಾಳ.

ಭಾರತಿ ನೀ ಪರಿಪಾಲಿಸೇ । ವಾರಿಜಾಂಬಕಿ ಮಾತ ಲಾಲಿಸೇ ॥ ಪಲ್ಲ ॥ ಆರದಾ ಭವವೆಂಬ ಮಾರಿಯ ಹೊಯಿಲಿಗೆ ಶ್ರೀರಾಮ ಪಾದದಿಚ್ಛೈಸಿ ವಿಘ್ನ ಹರಿಸಿ ಯತ್ನ ಪೂರೈಸಿ ॥ ೧ ॥ ಭಕ್ತ್ಯಭಿಮಾನಿ ಸದ್ಯುಕ್ತಿಯುತ ಹರಿ । ಭಕ್ತನೆಂದೇ ನೀನೆನ್ನ ವಾಗ್ವಾಣಿ ಪಲ್ಲವಪಾಣಿ ಪನ್ನಗವೇಣೀ ॥ ॥ ೨ ॥ ವೇದಾಂತವೇದ್ಯ ಶ್ರೀವೇಣುಗೋಪಾಲನ । ಪಾದದೊಳಿರಿಸೆನ್ನ ಸತ್ಪ್ರೀತೆ ಆಶ್ರಿತ ಪೋತೆ ಶ್ರೀಜಗನ್ಮಾತೆ ॥ ೩ ॥ ಶ್ರೀಃ ॥

## ೧೬೮. ರಾಗ ಪೀಲು. ಆದಿತಾಳ.

ನಾರಾಯಣ ಗೋವಿಂದ ಹರಿಹರಿ । ನಾರಾಯಣ ಗೋವಿಂದ ॥ ಪಲ್ಲ ॥ ನಾರಾಯಣ ಗೋವಿಂದ ಮುಕುಂದ । ಪರತರ ಪರಮಾನಂದ ॥ ಅನು ಪಲ್ಲ ॥ ಮಚ್ಛರೂಪಿಲಿ ಹೆಚ್ಚಿದ ದೈತ್ಯರ । ತುಚ್ಛಿಸಿ ವೇದವ ತಂದ ಹರಿ ॥ ॥ ೧ ॥ ಸ್ವಚ್ಛ ಮಂದರ ಯದೃಚ್ಛದಿ ಮುಣುಗಲು । ಕಚ್ಛಪವೇಷದಿ ನಿಂದಾ ಹರಿ ॥ ೨ ॥ ಶ್ರೀಕರಹರಿ ಬಹುಭೀಕರ ದಿತಿಜರ । ಸೂಕರ ರೂಪಿಲಿ ಕೊಂದಾ ॥ ೩ ॥ ಶಂಬರಾರಿಪಿತ ಕಂಬು ಚಕ್ರಧರ । ಕಂಬವ ಭೇದಿಸಿ ಬಂದ ಹರಿ ॥ ೪ ॥ ಶಾಮರೂಪ ಗುಣಧಾಮ ಹರಿಯು ತಾ । ವಾಮನರೂಪಿಲಿ ನಿಂದಾಹರಿ ॥ ೫ ॥ ಕ್ಷತ್ರಿಕುಲವ ನಿಕ್ಷತ್ರ ಮಾಡಲು ಭೃಗು । ಪುತ್ರನಾಗಿ ತಾ ನಿಂದಾ ಹರಿ ॥ ೬ ॥ ದಶರಥಸುತ ಹರಿ ದಶ ಮುಖನಳಿದು । ಕುಶಲದಿ ಸೀತೆಯ ತಂದಾ ಹರಿ ॥ ೭ ॥ ನಂದಗೋಪನ ಕಂದನು ಬಹು ಗೋ । ವೃಂದದೊಳಗೆ ತಾ ನಿಂದಾ ಹರಿ ॥ ೮ ॥ ಅಂಗ ನೆಯರ ವ್ರತ ಭಂಗಮಾಡಲ । ನಂಗಜನಕ ತಾ ಬಂದಾ ಹರಿ ॥ ೯ ॥ ದುಷ್ಟರನಳಿದು ಶಿಷ್ಟಜನರ ಪರ । ಮೇಷ್ಠಿಯೆನಿಸಿ ತಾ ನಿಂದಾ ಹರಿ ॥ ೧೦ ॥ ಶ್ರೀದವಿಠಲ ಕರುಣದಿಂದಲಿ । ನಂದತತಿ ಸಲಹುವೆನೆಂದಾ ಹರಿ ॥ ೧೧ ॥

## ೧೬೯. ರಾಗ ಶಂಕರಾಭರಣ, ರೂಪಕತಾಳ.

ಸಂಗವಾಗಲಿ ಸಾಧು ಸಂಗವಾಗಲಿ ॥ ಪಲ್ಲ ॥ ಸಂಗದಿಂದ ಲಿಂಗದೇಹ ಭಂಗವಾಗಲಿ ॥ ಅನುಪಲ್ಲ ॥ ಅಚ್ಯುತಾಂಘ್ರಿ ನಿಷ್ಠರ ಯ । ದೃಚ್ಛಾಲಾಭ

ತುಷ್ಟರಾ ॥ ನಿಶ್ಚಯ ಜ್ಞಾನವಂತರಾ । ದಕ್ಷ ಭಾಗವತರ ನಿತ್ಯ ॥ ೧ ॥ ತಂತ್ರಸಾರ ಅಷ್ಟಮಹಾ । ಮಂತ್ರ ಪರಿಪೂರ್ಣ ಸ್ನೇಹ ॥ ಯಂತ್ರದಿಂದ ಜಗ ಸ್ವಾ । ತಂತ್ರನ ಗುರಿಮಾಡುವವರ ಸಂಗ ॥ ೨ ॥ ಪಂಚಸಂಸ್ಕಾರ ಭೇದ । ಪಂಚಕಯುಕತರಾಗಿ ಪ್ರ ॥ ಪಂಚಸೂತ್ರ ಪ್ರಸನ್ನವೆಂಕಟ । ಪಂಚಬಾಣನಯ್ಯನವರ ॥ ೩ ॥ ಶ್ರೀಃ ॥

## ೧೭೦. ರಾಗ ಭೈರವಿ. ತ್ರಿಪುಟತಾಳ.

ಜ್ಞಾನವಂತರ ಸಂಗವಿರಲು ಸ್ನಾನವೇತಕೆ । ನಾನು ಯೆಂಬದು ಬಿಟ್ಟಮೇಲೆ ನರಕವೇತಕೇ ॥ ಪಲ್ಲ ॥ ಮೃತ್ತಿಕೆಶೌಚ ಮಾಡದವರ ಆಚಾರವೇತಕೆ । ಚಿತ್ತಶುದ್ಧಿಯಿಲ್ಲದವರ ವೈರಾಗ್ಯವೇತಕೆ ॥ ಸತ್ಯವಾದಿಗಳಾಗದವರ ವ್ರತಗಳ್ಯಾತಕೆ । ಉತ್ತಮರು ಹಿರಿಯರಿಲ್ಲದಂಥ ಸಭೆಯು ಯಾತಕೆ ॥ ೧ ॥ ಪತಿಯ ಆಜ್ಞ ಮೀರಿದಂಥವಳ ಸ್ನೇತಿಯೇತಕೆ । ಸತಿಗೋಳಗಾಗಿ ನಡಿಯಲವರ ಸಾಹಸವೇತಕೆ ॥ ಯತಿಯ ನಿಂದೆ ಮಾಡಿದವರ ಮತಿಯು ಯೇತಕೆ । ಅತಿವಿರೋಧ ಬೆಳಿಸುವಂಥ ಅಣ್ಣನ್ಯಾತಕೆ ॥ ೨ ॥ ಆಗಬಾರದವನ ಮನೆಯ ಅನ್ನವೇತಕೆ । ಯೋಗಿಯಾದಮೇಲೆ ಪ್ರವ್ಯಾಸೆಯೇತಕೆ ॥ ರೋಗಿಯಾದಮೇಲೆ ಹೆಣ್ಣಿನ ಭೋಗವೇತಕೆ । ಭಾಗೀರಥಿಯು ಮಿಂದ ಮೇಲೆ ದೋಷವೇತಕೆ ॥ ೩ ॥ ಕಾಣದಾ ಕುರುಡನಿಗಿನ್ನು ಕನ್ನಡಿಯೇತಕೆ । ಗಾಣಕೆ ಕಟ್ಟಿದ ಯೆತ್ತಿಗೆ ಗೆಜ್ಜೆಯೇತಕೆ ॥ ತಾನು ಉಣದೆ ಪರರಿಗೀಯದ ಧನವಿದ್ಯಾತಕೆ । ರಾಣಿಯಿಲ್ಲದವನು ಮಾಡುವ ಕರ್ಮವೇತಕೆ ॥ ೪ ॥ ಮಕ್ಕಳನ್ನು ಮಾರಿಗೊಂಬ ತಂದೆಯೇತಕೆ । ರೊಕ್ಕಕಾಗಿ ಬಡದಾಡುವ ತಮ್ಮನೇತಕೆ ॥ ಠಕ್ಕುಲಾತೆಬಡುವಂತ ಸನ್ಯಾಸ ಯೇತಕೆ । ಠಕ್ಕುಭಕುತಿ ಮಾಡುವಂಥ ದಾಸನೇತಕೇ ॥ ೫ ॥ ಭಾಗವತರ ದ್ವೇಷಿಗಿನ್ನು ಯೋಗ ಯೇತಕೆ । ರಾಗದ್ವೇಷ ಬಿಡದೆ ಇರುವ ಭೋಗವೇತಕೆ ॥ ನಾಗಶಯನನ ಪೊಗಳದಾ ನಾಲಿಗೆಯೇತಕೆ । ನಗುತ ಪರರ ಹಿಂಸಿಸುತಿಪ್ಪ ಒಗತನೇತಕೆ ॥ ೬ ॥ ಗುರು ಉಪದೇಶವಿಲ್ಲದಂಥ ದಾಸನೇತಕೆ । ಅರಿತು ವಿದ್ಯ ಪೇಳದಂಥ ಗುರುವು ಯೇತಕೆ ॥ ಮರ್ಮ

ವರಿತು ನಡಿಯದಂಥ ಹೆಣ್ಣು ಯೇತಕೆ । ಮೋಹನ್ನವಿಠಲ ನಮ್ಮೊಳಿರಲು ಭಯವು ಯೇತಕೆ ॥ ೭ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೭೧. ರಾಗ ಆನಂದಭೈರವಿ. ಆದಿತಾಳ.

ರಘೂತ್ತಮ ಗುರುರಾಯ । ರಘುರಾಮ ಪ್ರಿಯಾ ॥ ಪಲ್ಲ ॥ ಒಗೆಬಗೆಯಲಿ ಶಿರಬಾಗಿ ಬೇಡುವೆ ಮತಿಯ । ಭಾಗ್ಯವನಿತ್ತು ಕಾವ ರಘುವರ್ಯ ಕರಜಾತ ॥ ಅನುಪಲ್ಲ ॥ ಭಾವಶುದ್ಧ ಜನಂಗೆ ಭಾವಬೋಧವ ರಚಿಸಿ । ಭವದುಃಖ ಕಳೆಯುವ ಭುವನಪಾವನ ಚರಿತಾ ॥ ೧ ॥ ವಾತ ತಾಪಾದಿ ಸಹನಾ ಅತಿತಪ್ಪೋಮಾಸುವಾ । ತುತಿಸಬಲ್ಲೆನೆ ನಿನ್ನ ಪ್ರೀತಿಲಿ ಸಲಹೊಯೆನ್ನ ॥ ೨ ॥ ವಿಜಯ ಹಯಗ್ರೀವ ನಿಜರೂಪ ತಾನಾದದಿ । ಗ್ವಿಜಯ ಸೀತಾರಾಮ ಭಜನೆಯ ಮಾಡುವ ॥ ೩ ॥ ಶ್ರೀ ॥

### ೧೭೨. ರಾಗ ಮುಖಾರಿ. ಝಂಪೆತಾಳ.

ವಿಜಯೀಂದ್ರ ಮುನೀಂದ್ರರೆಂಬಾಶ್ಚರ್ಯದ ಗಜೇಂದ್ರ ಬಂದಿದೆ ॥ ಪಲ್ಲ ॥ ಸುಜನರು ನೋಡೋಣ ಬನ್ನಿ ॥ ಅನುಪಲ್ಲ ॥ ಕಲುಷವೆಂಬ ಪಂಕವ ನೀಡ್ಯಾಡಿ । ವಿಮಲ ಶ್ರೀಹರಿಯ ಪಾದತೀರ್ಥವ ಜಲಪಾನವ ಮಾಡಿ । ಮಧ್ವಮತಾಂಬುಧಿಯೊಳು । ಮುಣಗಿ ಮುಣಗಿ ನಲಿದಾಡುತಲಿ ॥ ॥ ೧ ॥ ರಮೇಶನ ಧ್ಯಾನವೆಂಬ ಮದವೇರಿ । ಕುಯುಕುತಿ ಕವಳಿಯನು ಕಿತ್ತೀಡ್ಯಾಡಿ ॥ ವಿಮಲ ಶ್ರೀಹರಿ ಪಾದರಜ ಶಿರದಲಿ ನೀಡಿ । ಕುಮತಿಗಳೆಂಬೊ ತರುಗಳ ಮುರಿಯುತಲಿ ॥ ೨ ॥ ಗುರುಸುರೇಂದ್ರತೀರ್ಥರೆಂಬ ವರಮಾವಟಿಗನಾಜ್ಞದಲ್ಲಿದ್ದು । ಗುರುಮಧ್ವಪತಿವಿಠಲನ ನವವಿಧ ಭಕ್ತ । ಸರಪಳಿಯೊಳು ನಲಿನಲಿದಾಡುತಲೀ ॥ ೩ ॥ ಶ್ರೀ ।

### ೧೭೩. ರಾಗ ತೋಡಿ. ಅಟತಾಳ.

ವಂದಿಪೆ ಪುರಂದರದಾಸರ ಪಾದ । ದ್ವಂದ್ವಕ್ಕೆ ನಾನು ನಿರಂತರ ॥ ಪಲ್ಲ ॥ ಮಂದರಧರ ಗೋವಿಂದ ಮುಕುಂದನ । ಯೆಂದೆಂದಿಗೂ ಬಿಡದೆ

ವಂದಿಸುವರ ಪಾದ ॥ ಅನುಪಲ್ಲ ॥ ಒದಗಿದಜ್ಞಾನಗಳೋಡಿಸಿ ಮತ್ತೆ । ಸದಮಲ ಜ್ಞಾನವ ಪಾಲಿಸಿ ॥ ಪದುಮನಾಭನ ಕಥೆ ಪೇಳಿಸಿ ಕಾವ । ಮುದದಿ ಪಾಲಿಪನ ಧ್ಯಾನಿಸಿ ಧ್ಯಾನಿಸಿ ॥ ೧ ॥ ಮೊರೆಹೊಕ್ಕ ಸುಜನರಿಗಿಹಪರದ ಸುಖ । ಕರಗಳ ನೊದಹಿಸು ಹರಿಪಾದವ ॥ ಪರಮಭಕುತಿಯನೆಂದರಿದೀವಾ । ಸ್ಮರಿಸುವೆ ಮರೆಯದೆ ಕರಮುಗಿದೂ ಕರಮುಗಿದೂ ॥ ॥ ೨ ॥ ಅನಾಥಜನರನ್ನು ಮನ್ನಿಸಿ । ಸಿರಿವೇಣುಗೋಪಾಲನ್ನ ಕಾಣಿಸಿ ॥ ಜ್ಞಾನ ಭಕುತಿಪಥ ತೋರಿಸಿ ಕಾವ । ಜ್ಞಾನಿಗಳರಸನ ಸ್ತುತಿಸಿ ಸ್ತುತಿಸಿ ॥ ೩ ॥ ಶ್ರೀಃ ॥

## ೧೭೪. ರಾಗ ಆನಂದಭೈರವಿ. ರೂಪಕತಾಳ.

ವಿಜಯದಾಸರ ಭಜನೆ ಮಾಡಿರೊ ॥ ಪಲ್ಲ ॥ ವಿಜಯರಾಯರ ಭಜನೆ ಮಾಡಲು । ಅಜನ ಜನಕ ನಿಜದಿ ವೊಲಿದು ॥ ಕುಜನಸಂಗತಿ ತ್ಯಜನೆ ಮಾಡಿಸಿ । ಸುಜನರಾ ಪಾದಾಂಬುಜದಲ್ಲಿಡುವ ॥ ಅನುಪಲ್ಲ ॥ ಶುದ್ಧ ಮಂದರನ್ನ ಉದ್ಧಾರಾರ್ಥವಾಗಿ । ಮಧ್ವರಾಯರ ಮತಾಬ್ಧಿಯೊಳು ಪುಟ್ಟಿ । ಸಿದ್ಧಾಂತ ಸ್ಥಾಪಿಸಿ ಗೆದ್ದು ವಾದಿಗಳ । ಹೆದ್ದೈವವೇ ಅನಿರುದ್ಧನೆಂದು ಪದ್ಧತಿಯ ಪೇಳಿ । ಸದ್ವೈಷ್ಣವರನ್ನು ಉದ್ಧಾರಮಾಡುವ ಉದ್ಯೋಗದಿಂದಲಿ । ಹದ್ದನೇರಿಬಪ್ಪ ಪದ್ಮನಾಭನ । ಹೃದ್ಯದೊಳಿಟ್ಟ ಸದ್ಗುರುರಾಯರ ॥ ೧ ॥ ಭೂಸುರಾಬ್ಧಿಗೇ ತಾರೇಶನಂತೊಪ್ಪುವ । ಸಾಸಿರನಾಮದ ಶೇಷಗಿರಿ ಶ್ರೀಸಿ । ವಾಸನಾ ಯಾತ್ರೆಯ ಲೇಸಾಗಿ ಮಾಡಿ ಸಂತೋಷದಿಂದ ॥ ವಿಾಸಲ ಪುಣ್ಯದ ರಾಶಿಯ ಫಳಿಸಿ । ಕೇಶವನ ನಿಜದಾಸನೆಂತೆನಿಸಿ । ವಾಸುದೇವನ ಮಾನಸದೊಳಿಟ್ಟು ದು । ರಾಶೆ ತೊಲಗಿಸಿ ಕ್ಲೇಶಪಡದಲೆ । ಭೂಸುರ ಸದ್ಗುರು ಸುರತರುವಾದ ॥ ೨ ॥ ಪುರಂದರದಾಸರ ವರಕುಮಾರ । ಕರಾರವಿಂದ ಪಾದ ಶಿರದಿ ಧರಿಸಿ । ಹರಿಯ ನಾಮ ಉಚ್ಚಾರಣೆ ಮಾಡುತ । ಹರುಷದಿಂದ ಪದರೂಪಾದಿ ಧರೆಯೊಳಗೆಲ್ಲ । ಅರುಹಿ ದುರ್ಜನರ ಅರಿಯೆಂದೆನಿಸಿ । ಮೆರೆಯುತಲಿಪ್ಪ ಶಿರಿಮೋಹನ್ನವಿಠಲನ್ನ । ಪರನೆಂದು ಅರುಹಿದ ಸುರತರುವಾದ ॥ ೩ ॥

### ೧೭೫. ರಾಗ ಸೌರಾಷ್ಟ್ರ. ಅಟತಾಳ.

ನಂಬಿದೆ ನಾ ನಿನ್ನ ಚರಣಕಮಲವನ್ನು । ವಿಜಯರಾಯಾ ॥ ಪಲ್ಲ ॥ ಬೆಂಬಿಡದಲೆ ವಿಷಯ ಹಂಬಲ ಬಿಡಿಸಯ್ಯ ॥ ಅನುಪಲ್ಲ ॥ ತಾಯಿ ಯೆಳೆ ಶಿಶುವನ್ನು ಬಿಟ್ಟಿರುವದುಂಟೆ । ವಿಜಯರಾಯಾ । ಬಾಯಬಿಡುವೆ ನಾ ಭವದಲ್ಲಿ ಸಿಗಿಬಿದ್ದು । ವಿಜಯರಾಯಾ ॥ ನೋಯಲಾರೆನೊ ಯೆನ್ನ ಕಾಯೊ ಕರುಣದಿಂದ । ವಿಜಯರಾಯ । ಕಾಯ ಮನವು ನಿನ್ನ ಚರಣ ಕೊಪ್ಪಿಸಿದೆನೊ । ವಿಜಯರಾಯಾ ॥ ೧ ॥ ಯೆತ್ತಗಾಣದ ಕರ್ಮ ಕತ್ತಲೆ ಯೊಳು ಸುತ್ತಿ । ವಿಜಯರಾಯಾ । ತತ್ಥಳಗೊಳುತಿಪ್ಪೆ ಯೆತ್ತಿಕೊ ಯೆನ್ನಾ । ವಿಜಯರಾಯಾ ॥ ಪೆತ್ತ ತಂದೆಗೆ ಮಗ ಭಾರವಾಗುವದುಂಟೆ । ವಿಜಯರಾಯ । ವಿತ್ತಭಾಗ್ಯವನೊಲ್ಲೆ ಎಂದೆಂದಿಗೂ । ವಿಜಯರಾಯಾ ॥ ೨ ॥ ತುಂಬಿದ ಭಂಡಾರ ಸಂಪತ್ತು ಯೆನಗೆಂದು । ವಿಜಯರಾಯಾ । ಹಂಬಲಿಸುತ ಬಲು ಸಂಭ್ರಮದಿರುತಿಪ್ಪೆ । ವಿಜಯರಾಯಾ ॥ ಸಂಬಳ ಕಾರ ಶಿಷ್ಯ ನಿನಗಲ್ಲ ಕೇಳಯ್ಯ । ವಿಜಯರಾಯಾ । ಬಿಂಬ ಶ್ರೀವೆಂಕಟ ವಿಠಲನ ತೋರೋ ನೀ । ವಿಜಯರಾಯಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೭೬. ರಾಗ ರೇಗುಪ್ತಿ. ಅಟತಾಳ.

ಶ್ರೀಜಗನ್ನಾಥದಾಸಾ ನಮಿಪೆ ಗುರು । ರಾಜಾ ತಾತ್ವಿಕವಪುಷಾ ॥ ॥ ಪಲ್ಲ ॥ ಈ ಜಗದೊಳು ನಿಮಗೆಣೆಗಾಣೆ ಸತತ ನಿ । ರ್ವ್ಯಾಜದಿ ಹರಿಯ ಗುಣೋಪಾಸನೆ ಮಾಳ್ಪ ॥ ಅನುಪಲ್ಲ ॥ ಹರಿದಾಸಕುಲವರ್ಯನೆನಿಸಿ ಕಲ್ಪತರುವಂದದಿ ಚರ್ಯ । ಚರಿಸುತ ಧರೆಯೊಳು ಮೆರೆವ ಮಹಾತ್ಮರ । ಚರಣೇಂದೀವರಯುಗ್ಮ ದರುಶನ ಮಾಳ್ಪರ ॥ ದುರಿತರಾಶಿಗಳರಗೊಡದೆ ನೆರೆಪರಮ ಮುಕ್ತಿಯ ದಾರಿ ತೋರುತ । ಶಿರಿಸಹಿತ ಹರಿಯೊಲಿಸು ವಂದದಿ । ಕರುಣಮಾಳ್ಪ ಸುಗುಣಮಹೋದಧೇ ॥ ೧ ॥ ರವಿಯು ಸಂಚರಿಸುವಂತೆ ಭೂವಲಯದಿ ಕವಿಗಳು ಚರಿಸುವಂತೆ । ಅವಿರುದ್ಧ ತ್ರಯ ಜ್ಞಾನ ಪ್ರವಹಗಳಿಂದಲಿ । ಭುವನೈಕವೇದ್ಯನ ಶ್ರವಣ ಭಕುತಿ

ಯಿಂದ । ದಿವಸ ದಿವಸದಿ ಪ್ರೀತಿಬಡಿಸುತ ಧ್ರುವವರದನಂಘ್ರಿಗರ್ಪಿಸಿ । ಭುವನಪಾವನ ಮಾಳ್ಪಗೋಸುಗ । ಅವನಿತಳದಿ ವಿಮರಿಸುತಿಹ ಗುರು ॥ ॥ ೨ ॥ ಅಹೋರಾತ್ರಿ ಕ್ಷಣಬಿಡದೆ ಸನ್ಮಾನದಿ ಹೃದ್ಗುಹದೊಳಜನ ಮರಿಯದೆ । ಸಹನಗುಣಗಣವನುದಿನ ಸ್ಮರಿಸುತ । ಸಹವಾದಿ ಶಮದಮ ಯಮನಿಯಮಗಳನು ॥ ವಹಿಸಿ ಶ್ರೀದವಿಠಲನಂಘ್ರಿಯ । ಮಹಿಮೆ ತೋರುತ ಪೂಜಿಸುತ ಬಲ್ । ಮಹಿತ ಪರಮಾನಂದತೀರ್ಥರ । ವಿಹಿತ ಶಾಸ್ತ್ರಗಳರಿತು ಬೋಧಿಪ ॥ ೩ ॥ ಶ್ರೀಃ ॥

## ೧೭೭. ರಾಗ ಮಧ್ಯಮಾವತಿ. ಆದಿತಾಳ.

**ಲಾ**ಲಿ ಲಾಲಿ ತ್ರಿಭುವನಪಾವನ ಲಾಲಿ ॥ ಪಲ್ಲ ॥ ಅಂಜನದೇವಿಯು ಕಂದಗೆ ಲಾಲಿ । ಕಂಜಾಕ್ಷಿಗೆ ಮುದ್ರಿಕೆಯಿತ್ತಗೆ ಲಾಲಿ ॥ ಅಂಜದೆ ಅಸುರರ ಕೊಂದಗೆ ಲಾಲಿ । ಸಂಜೀವನಗಿರಿ ತಂದಗೆ ಲಾಲಿ ॥ ೧ ॥ ಕುಂತಿಯುದರದಿ ಬಂದಗೆ ಲಾಲಿ । ದಂತಿಯ ಗಗನಕ್ಕೆ ವಗದಗೆ ಲಾಲಿ । ಭ್ರಾಂತನ ಉದರವ ಬಗೆದಗೆ ಲಾಲಿ । ಚಿಂತಾಮಣಿ ಭೀಮರಾಯಗೆ ಲಾಲಿ ॥ ೨ ॥ ಸೋಹಂ ಯೆಂಬರ ತರಿದಾಗೆ ಲಾಲಿ । ದಾ । ಸೋಽಹಂ ಯೆಂಬರ ಪೊರೆದಗೆ ಲಾಲಿ ॥ ಮೋಹನ್ನವಿಠಲನ್ನ ಭಜಿಪಗೆ ಲಾಲಿ । ಸ್ನೇಹದಿ ಭಕುತರ ಪೊರೆದಗೆ ಲಾಲಿ ॥ ೩ ॥ ಶ್ರೀಃ ॥

## ೧೭೮. ರಾಗ ನಾದನಾಮಕ್ರಿಯೆ. ಆದಿತಾಳ.

**ಪಾ**ಹಿ ಪಾಹಿ ಪಾಹಿ । ಗುರುಮೋಹನರಾಯಾ ॥ ಪಲ್ಲ ॥ ಪಾಹಿ ಪಾಹಿ ಗುರು ಮೋಹನ ಸಿಂಧುರ । ವಾಹನ ಪದಪಂಕೇರುಹ ಭೃಂಗ ॥ ಅನುಪಲ್ಲ ॥ ನವಭಕುತಿಗಳೆಂಬೊ ಸರಪಳಿಯೊಳು । ನವನವರೂಪದಿ ನಲಿವ ಸುಧೀರಾ ॥ ೧ ॥ ಪದುಮನಾಭನ ಧ್ಯಾನದ ಮದವೇರಿ । ಪದೆಪದೆಗೆ ಹರಿಪದವ ಗಾವಾ ॥ ೨ ॥ ವಿಜಯದಾಸರ ಪದರಜವ ಧರಿಸಿ । ವೀರಜ ಪ್ರಾಣೇಶವಿಠಲನ ಭಜಿಸಿದಿ ॥ ೩ ॥ ಶ್ರೀಃ ॥

೧೭೯. ರಾಗ ಭೂಪಾಳಿ. ಏಕತಾಳ. (ಪಾರ್ಥಿಕಷಟ್ಪದಿ)

**ನೆ**ನಸಿದಂತವರಘನಾಶನಾ ॥ ಪಲ್ಲ ॥ ನೆನಸಿದಂತವರಘನಾಶ ಅನುಮಾ
ನವಿಲ್ಲದಕೆ । ವನಜನಾಭನ ಒಲಿಮೆ ಘನವಾಗಿ ಪಾಲಿಪದು । ದಿನದಿನ
ದಲಿ ಬಿಡದೆ ವಿಜಯರಾಯರ ದಿವ್ಯ । ಗುಣಕರ್ಮ ಕೊಂಡಾಡಿರೋ ॥
॥ ಅನುಪಲ್ಲ ॥ ಆದಿಯಲಿ ಸುರಮುನಿಯ ಪಾದಸೇವೆಯ ಮಾಡಿ ।
ಮೋದದಲಿ ಸುರಲೀಲೆಯೆಂಬ ಕಪಿ ತ್ರೇತೆಯಲಿ । ಆ ದ್ವಾಪರದಿ ಕಂಪನ
ಯೆಂಬ ನಾಮದಲೀ ಶ್ರೀಧರನ ಸೇವಿಸುತಿರ್ದ ॥ ಕಾದಿಷ್ಟಿ ಕಲಿಯುಗದಿ
ಪುರಂದರದಾಸರ । ಸ್ವಾದುವಚನವ ಕೇಳಗಾಧ ತುರುಕರುವಾಗಿ ।
ಭೇದವಿಲ್ಲದೆ ಜನಿಸಿಬರುತಲೆ ಮತ್ತೆ ಮೇದಿನಿಯಸುರ ಜನ್ಮದೀ ॥ ೧ ॥
ವರತುಂಗಭದ್ರತೀರದ ಗ್ರಾಮ ಅಶ್ವತ್ಥ । ನರಸಿಂಹ ಭೀಕನ ಬರವಿ
ಯೆಂಬ ನಾಮ । ದಿರುತಿಪ್ಪ ಶ್ರೀನಿವಾಸಪ್ಪ ಕೂಸಮ್ಮ ಶ್ರೀಗುರುಸೇವೆ
ಮಾಡಿ ಸತತ ॥ ವರಪಡದು ಪಡದಳೂ ಯೆರಡೊಂದು ಪುತ್ರರನ ।
ಹಿರಿಯಮಗ ದಾಸಪ್ಪನೆಂಬ ಯಿವರ ನಾಮಾ । ಕರದು ಮುಟ್ಟಿಸಿ ಸಾಕಿ
ಮುಂಜಿಮದುವೆಯ ಮಾಡಿ ಇರುತಿರಲು ಕೆಲವು ಕಾಲಾ ॥ ೨ ॥ ಲೋಕ
ಜನರಂತೆ ಲೌಕಿಕದೊಳಗಾಚರಿಸಿ । ಈ ಕಾಯಕೋಸುಗದಿ ಕಾಕು
ಜನರ ಸೇವೆ । ನೇಕಪರಿ ಮಾಡಿ ವಸ್ತ್ರಾನ್ನ ಕಾಣದೆ ಮರುಗಿ ಸಾಕುವ
ರಿಲ್ಲವೆನುತಾ ॥ ಬೇಕಾದ ದೇಶವನು ತಿರುಗುತಿರೆ ಪೊಂದು ಕಡೆ । ತಾಕೆ
ಚೋರರು ವಸ್ತ್ರಾದಿಗಳನಪಹರಿಸೆ । ಯಾಕೆ ಈ ಬಂಧುಬಳಗೆಂದೆನುತ
ಅಲ್ಲಿಂದ ನಾಕಸದಿ ವಿಸಾಯ್ವೆನೆಂದು ॥ ೩ ॥ ಹಿರಿಯರಿಗೆ ಪೇಳದಲೆ ತೆರಳಿ
ಯಾತ್ರೆಗೆ ಪೋಗಿ । ಎರಡೆಂಟು ವತ್ಸರದ ತರಳಪ್ರಾಯದಲಿಂದ । ಸರ್ವ
ತೀರ್ಥಕ್ಷೇತ್ರ ಮಿಂದು ವಿಂಶತಿವತ್ಸರಕೆ ಬಂದ ಕಾಲವಾ ॥ ವರಮಾತೃ
ಪಿತೃ ಸಹೋದರರ ಸಹವಾಗಿನ್ನು । ಬೆರತ ಮಾನವರಂತೆ ಸಂಸಾರ
ವೃತ್ತಿಯಲಿ । ಬೆರಸಿ ಈರೇಳು ವರುಷಕೆ ಮೆಲ್ಲನೆ ಶಿರಿವರನ ಕೃಪೆಯೋಗ
ತಿಳಿದೂ ॥ ೪ ॥ ಮತ್ತು ನಡದರು ಶಿರಿ ಪುತ್ತುಮಶ್ಲೋಕಹರಿ । ಪೆತ್ತ
ಗಂಗೆಯ ಸ್ನಾನ ಗಯದಲ್ಲಿ ಪಿಂಡವನು । ಇತ್ತು ಮರಳಿ ಬರುತ ವಾರ
ಣಾಸಿಯಲ್ಲಿ ಉತ್ತುಮರ ಸಂಗದಿಂದಾ ॥ ನಿತ್ಯ ಸ್ನಾನವೆ ಸಂಧ್ಯ ಶುಚಿ

ಶಾಗಿ ಮಲಗಿರಲು । ಸತ್ಯವಾಗಿಹ ಸ್ವಪ್ನದಲಿ ನರಹರಿ ಪಡದ । ಪುತ್ರ
ಪ್ಪಿಸಿದಂತೆ ವ್ಯಾಸರೂಪಿಲಿ ಇವರ ಹತ್ತಿಗರದು ಕರುಣದಿಂ ॥ ೫ ॥
ರನದಿಯು ದಾಟಿಸಿ ಕರದೊಯಿದು ಆಚೆಯಲಿ । ಇರುತಿಪ್ಪ ವ್ಯಾಸ
ಶಿಯುಪುರದ ಧೊರೆಯಾದ । ಶಿರಿವ್ಯಾಸದೇವ ಬಲು ಸುರನರೋರುಗ
ುನಿನಿಕರದೊಳು ಕುಳುತಿರಲು ॥ ಶಿರಬಾಗಿ ತುತಿಸೆನುತ ತವಕದಿಂದ
ುರಿಸಿ । ಕರದು ಪೇಳಿದರು ಬಹುಪರಿಯಿಂದ ಆದರಿಸಿ । ಸರಸದಿಂದಲಿ
ನು ಹರಿಚರಿತೆ ಪೇಳೆನುತ ಕರುಣರಸದಿಂದಲೂ ॥ ೬ ॥ ಎಚ್ಚತ್ತು
ುೇಡೆ ಶಿರಿಅಚ್ಯುತನ ಮಹಿಮೆಯನು । ಬಿಚ್ಚಿ ವಾದರಿಸೆನುತ ಹೆಚ್ಚಿ
ತೋಷದಲಿ । ಕೊಚ್ಚಿಪೋದವು ಮನದ ಹೆಚ್ಚಿದಾ ಪಾಪಗಳು ಸ್ವಚ್ಛ
ತ್ತದಲಿ ಹರಿಯಾ ॥ ನಿಚ್ಚ ಮನಬಂದಂತೆ ಉಚ್ಚರಿಸಿ ಸಿದ್ಧಾಂತ ।
ಕ್ಕಿ ಸುಖತೀರ್ಥಮತ ಮೆಚ್ಚಿಕವನ ಪೇಳಿ । ಉಚ್ಚಮನವುಳ್ಳವರ ತಿಪ್ಪಿ
ನಭಕುತಿ ಮುಚ್ಚುಕಾಣಿಕೆಯಿತ್ತರೂ ॥ ೭ ॥ ತೃತಿಯ ಕಾಶಿಯಾತ್ರೆ
ತ್ತೆ ಬಂದಾಗ ಉ । ನ್ನತವಾಗಿ ನಭಗಂಗೆ ಉಕ್ಕೇರಿ ಗಗನಕ್ಕೆ । ಅತಿ
ಯವಾಗಿ ಮುಚ್ಚೋದರಿಯ ನಾಮದಲಿ ಪ್ರತಿಯಿಲ್ಲದಂತೆ ತೋರೀ ॥
ತಿಸಿ ಅಲ್ಲಿಂದ ಸೇತುಸ್ನಾನಕ್ಕೈತಂದು । ರತಿಯಿಂದ ಮಾಡಿ ಸರ್ವರನ
ನ್ಧರಿಸುತ । ಮಿತಿಯಿಲ್ಲದೆ ಕಾಶಿಸೇತು ಪರಿಯಂತರಾ ಖತಿಯಿಂದ
ತಿಪಡದೇ ॥ ೮ ॥ ಲೋಕೋಪಕಾರಕ್ಕೆ ಹದಿನೆಂಟು ವತ್ಸರದ । ನೇಕ
ರ್ಥಕ್ಷೇತ್ರ ತಿರಿಗಿ ವೈರಾಗ್ಯದಲಿ । ಶ್ರೀಕಾಂತ ಹರಿಯ ಧೇನಿಸಿಕೊ
ಕ ಮನದೊಳಗೆ ಪ್ರಾಕೃತರ ಸಂಗ ತೊರೆದು ॥ ವೈಕುಂಠಯಾತ್ರೆಯ
ುವಸಂವತ್ಸರದ ಕಾ । ರ್ತಿಕ ಶುದ್ಧ ದಶಮಿ ಗುರುವಾರ ಪ್ರಹರ
ಳು । ರಾಕೇಂದುಬಿಂಬ ಹಯವದನವಿಠಲನಂಘ್ರಿ ಜೋಕೆಯಲಿ
ುದರೂ ॥ ೯ ॥ ಶ್ರೀಃ ॥

## ೧೮೦. ರಾಗ ಕಲ್ಯಾಣಿ, ಮಟ್ಟಿತಾಳ.

ಾಸರ ನೆರೆನಂಬಿರೋ । ಗುರುವಿಜಯ । ದಾಸರ ನೆರೆನಂಬಿರೋ ॥
ಲ್ಲ ॥ ದಾಸರ ನೆರೆನಂಬಿ ಯೋಸುಜನ್ಮದ ಭವ । ಪಾಶವ ಹರಿಸಿ

ರಮೇಶನ ಮಹಿಮೆಯ ॥ ಲೇಸಾಗಿ ವಿರಚಿಸಿ ಪರಮೋಲ್ಲಾಸದಲಿ ಜೀ । ವೇಶಭೇದವ ಯೇಸುಬಗೆಯಲಿ ತಿಳಿಯುತಲಿ ನೆರೆ । ದೋಷಬುದ್ಧಿಯ ನಾಶಗೈವರ ॥ ಅನುಪಲ್ಲ ॥ ಸಂದರುಶನವಮಾತ್ರದಿಂದ ಬಾಹೋ ದಿನದಿ । ಸಿಂಧುಸ್ನಾನದ ಫಲವೂ ಭಾವಶುದ್ಧಿಂದ । ವಂದನೆ ನಿರುತವು ಮಾಡಲು ಭವ । ಬಂಧನ ಪರಿಹರವೂ ಇಂದು ನಿಜವೂ ॥ ಕಂದುಗೊರಳಮರೇಂದ್ರ ವಂದ್ಯ ಮು । ಕುಂದನನು ಬಿಡದಂದು ಭಜಿಪ ಪು । ರಂದರನ ಪದ ದ್ವಂದ್ವಯುಗಳರ । ವಿಂದಮಧುಪರಾನಂದದಿಂದಲಿ ॥ ೧ ॥ ನರಮಾತ್ರ ರಿವರೆಂದು ನೆರೆ ತಿಳಿಯದೆ ಸುಂ । ದರವಾದ ಗುಣದಿಂದಲಿ ಶಿರಿವರ । ಚರಿತೆಯು ನಮಗೆ ಬಂದ ಕಂಟಕ ಬಂಧ । ಹರವೆಂದು ಮನದಲ್ಲಿ ನೆರೆ ತಿಳಿದವರು ॥ ಪರಮ ಧನ್ಯರು ಧರೆಗೆ ಯಾದವರರಸ । ಪೊರವನು ಕರು ಣದಲಿ ಭೂಸುರರ । ಗುರು ಧೊರೆ ಮರುತ ಪೊರೆವನು । ಸುರರವರ ಕಾದಿಹರು ಯೆನಿಪರ ॥ ೨ ॥ ಅವನಿಯೊಳಗೆ ಇವರನ ಒಲಿಸಿದಕೆ । ಪಾವನರಾಗಿ ಪೊಗುವರು ಭುವನದೊಳು । ಕವಿಗಳೆನಿಸುತಿಪ್ಪರು ತವಶಿ ಮಾರು । ಭುವನದ ಭವಕೆ ಪಾವಕರಾಗಿ ॥ ಭುವಿಸುರರ ಪಾವನ ಮಾ ಡುವ । ಭುವನ ವಿಧಿಸುತೆ ರಮಣಿ ಶಿರಿವಾ । ಧವ ಮೋಹನ್ನವಿಠಲ ರೇಯನೆ । ಆವಸರದ ಕಿಂಕರರ ಭಜಕರು ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೧. ರಾಗ ಮೋಹನ. ಅಟತಾಳ.

ನಿನ್ನ ಪಾದವ ನಂಬಿ ಅನ್ಯರಾಶ್ರಯವ್ಯಾಕೆ । ಚೆನ್ನ ಗುರುವಿಜಯ ರಾಯಾ ॥ ಪಲ್ಲ ॥ ಇನ್ನೇನು ಇನ್ನೇನು ಯೆನ್ನ ಕುಲಕೋಟಿ ಪಾ । ವನ್ನವಾದುದು ನಿಶ್ಚಯ ಜೀಯಾ ॥ ಅನುಪಲ್ಲ ॥ ಪಂಚಮಹ ಪಾತಕ ರೊಳಗೆ ಮೂರನೆ ಕಕ್ಷಿ ಕಾಂಚನದ್ರೋಹಿ ನಾನು । ಯೆನ । ಮುಂಚೆ ಬಂದಾಗೆ ಕೈಬಿಡವೆ ಪ್ರಪಂಚವ ಬಿಡು ಯೆಂದು ನುಡಿದೆ । ಯೆನ್ನ । ಸಂಚಿತಾಗಮವೆಲ್ಲ ತೊಡದೆ ಯೆನ್ನ ಕಂಚುಕಟ್ಟಳಿ ಕಲ್ಲೊತ್ತಿನ ಮೇಣ ಕಾಸಿಗೆ । ಪಂಛೇರು ಮಾಡಿ ನಡದೆ ಬಿಡದೆ ॥ ೧ ॥ ವ್ಯಾಸರಾಯ ಗುಹೆ

ಯೊಳಗೆ ನವಸ । ನ್ಯಾಸಿಗಳ ಸಮುಕ್ಷಮದಲಿ ಯೆನ್ನ । ದಾಸನಾಗೆನುತ ನೀ ಪೇಳ್ದೆ ಯೆನ್ನ । ವಾಶಿಪಂಘಗಳೆಲ್ಲ ತಾಳ್ದೆ ಒಲಿದು । ದೋಷಾಂಕುರ ಗಳೆಲ್ಲ ಶೀಳ್ದೆ ಸ್ವಾಮಿ । ಶ್ರೀಸರ್ವೋತ್ತಮನೆಂತೆಂದು ನೀ ಪೇಳಿ ಸಂ । ತೋಷದಿಂದೆನ್ನ ಪೊರದೆ ಬಿಡದೆ ॥ ೨ ॥ ರಾಜಾಧಿರಾಜರು ಬಂದು ಪ್ರಾರ್ಥಿಸಲು ಗುರು । ರಾಜ ಸೇನವರ ಮನೆಗೆ ಪೋಗಿ ದಿವ್ಯ । ಭೋಜನ ಮಾಡಿ ಫಲಗರವೆ ನಿತ್ಯ । ರಾಜಧಾನಿಗೆ ಪೋಗಿ ಬರುವೆ ಉಡು । ರಾಜ ನಂದದಿ ನಿತ್ಯ ಮೆರವೆ ಯೆನ್ನ । ಪೂಜಾಫಲವಿದೆಂದು ಆವಾಗೆನ್ನ ಪದ । ರಾಜೀವ ಧ್ಯಾನಿಸುವೆನೊ ಸ್ವಾಮಿಾ ॥ ೩ ॥ ಪುಸಿಯು ಈಜಗವೆಲ್ಲ ದೈವವು ತಾನೆನುತ । ಅಸಮವೇದ ಪೌರುಷ ಯೆಂಬಂಥ । ಭಸುಮಧಾರಿಯುನೆ ಕರದೆ ಅವನ । ಅಸುರಭಾವವನೆಲ್ಲ ಮುರಿದೆ ನಮ್ಮ । ಬಿಸಜಾಕ್ಷ ವರ ನೆಂದು ಮೆರದೆ ಸ್ವಾಮಿಾ । ಎಸೆವ ದ್ವಾದಶನಾಮ ಪಂಚಮುದ್ರೆಯ ನಿಡಿಸಿ । ನಸುನಗುತಲವನ ಪೊರದೆ ಬಿಡದೆ ॥ ೪ ॥ ಎನ್ನನೊಬ್ಬನ ಪಾಲಿ ಸಿದ್ದು ಬಲು ಗುರುತಲ್ಲ । ಚಿನ್ನವರದನ ಸಂತತಿಯೆಲ್ಲ । ನಿನ್ನ ಪಾಲಿಗೆ ಬಿಟ್ಟದಲ್ಲ ವಾಕು । ಅನ್ಯಥ ಮಾಡುವರು ಸಲ್ಲ ಪೋ । ಹನ್ನವಿಠಲ ಇದನು ಬಲ್ಲ ಮುನ್ನಾ । ಪನ್ನಗಶಯನ ಪ್ರಸನ್ನನಾದದಕೆ ಇದು । ಯೆನ್ನ ಮನೋರಥ ಸಿದ್ಧಿಯೊ ಸ್ವಾಮಿಾ ॥ ೫ ॥ ಶ್ರೀ ।

## ೧೮೨. ರಾಗ ಶಂಕರಾಭರಣ. ಅಟತಾಳ.

ಪೃಷದಶ್ವಾ ಪಾಲಿಸೊ ಎನ್ನಾ ಶೃಷದಶ್ವಾ ॥ ಪಲ್ಲ ॥ ಪೃಷದಶ್ವ ಪಾಲಿಸೊ ಎನ್ನ । ಈದು । ವಿಷಯ ತ್ಯಜಿಸಿ ಶ್ರೀಕೃಷ್ಣನ್ನ ॥ ಆಹ ॥ ಅಸಮಪದಾಬ್ಜ ಭಜಿಸುವಂತೆ ಪ್ರತಿದಿನ । ಹಸನಾದ ಜ್ಞಾನ ಪ್ರೇರಿಸು ಭಕ್ತಸುರತರು ॥ ಪೃಷದಶ್ವಾ ॥ ಅನುಪಲ್ಲ ॥ ಪರಿಸರ ಕೃಷ್ಣೇಶ ಗಂಧವಾಹ ಸಿರಿವಲ್ಲಭ ಪಾದಾರವಿಂದ । ಭೃಂಗ । ಪುರುಹೂತ ಮುಖಸುರವೃಂದಾ । ವಂದ್ಯ । ಗಿರಿಜಪಾಲಕ ಶತಾನಂದ । ಆಹ ॥ ಎರಪತ್ತು ಒಂದು ಸಾವಿರ ಆರುನೂ ಜಪ । ಸರ್ವಜೀವರೊಳಗೆ ಇರುಳು ಹಗಲು ಮಾಳ್ಪ ॥ ೧ ॥ ನಾಗಾದಿ ದಶರೂಪಧರ । ತಲೆ । ಬಾಗುವೆ ನಿನಗೆ ಉದಾರ । ವಿಕ್ರ । ಮಾಘಶಾನನ

ವೈಶ್ವನರ । ಹೇಸ । ದಾಗತಿ ಕುಜನಕುಠಾರ ॥ ಅಹ ॥ ಮಾಗಧರಿಪು ಹೊತ್ತುಹೋಗುತಲಿದೆ ಈಗ । ಭಾಗವತರ ಸಂಗ ಜಾಗುಮಾಡದ ಲೀಯೋ ॥ ೨ ॥ ದೀನವತ್ಸಲ ಶ್ರೀವಮಾರುತ । ಯಾತು । ಧಾನಸಂಹಾರನೆ ಮಾತ । ರಕ್ಷ । ಪ್ರಾಣೇಶವಿಠಲನ ದೂತ । ಚತು । ರಾನನ ಪದಯೋಗ್ಯವಾತ ॥ ಅಹ ॥ ಕ್ಷೋಣಿಯೊಳಿನ್ನಂಥ ಹೀನರಿಲ್ಲವೊ ಪಾಪ । ಕ್ಷೀಣಿಸಿ ಸಲಹೊ ಸುಷೇಣಾದಿ ಸೂದನ ॥ ೩ ॥ ಶ್ರೀಃ ॥

## ೧೮೩. ರಾಗ ಆರಭಿ. ಅಟತಾಳ.

ಹರಿಕಥಾಮೃತಸಾರ ಸರಸಸುಗ್ರಂಥವ । ಧರಣಿಸುರರಿಗಲ್ಲದೆ ॥ ದುರುಳ ಪಾಷಂಡಿಗಳರಿತು ಇದರ ಮರ್ಮ । ಹರುಷಿತರಾಗುವರೇ ॥ ಪಲ್ಲ ॥ ಹಿಮಮಯೂಖನ ನೋಡಿ ಕುಮುದಪುಷ್ಪವ ನೋಡಿ । ಕಮಲವು ಅರಳುವದೇ । ಯಮಿಜನರಂದದಿ ದಿನಮಣಿಯುದಯದಿ । ತಿಮಿರಘ್ನರ್ಘ್ಯ ಕೊಡಬಲ್ಲದೆ ॥ ೧ ॥ ಚಿನ್ನದಾಭರಣಗಳಿಡಲು ದಾಸಿಯು ದೇವ । ಕನ್ನಿಕೆಯಾಗುವಳೇ ॥ ಮನ್ನಣೆಯರಿಯದ ಮನುಜನ ಶಿರ । ಪುಣ್ಯಪುರುಷರಿಗೆರಗುವದೇ ॥ ೨ ॥ ಗಂಧವಾಹನ ಮತ ಪೊಂದದವರಿಗೆಮ । ಬಂಧ ತಪ್ಪುವದೇ ॥ ಮಂದಮತಿಗೆ ಶ್ಯಾಮಸುಂದರವಿಠಲನ । ಮಂದಿರ ದೊರಕುವದೇ ॥ ೩ ॥ ಶ್ರೀಃ ॥

## ೧೮೪. ರಾಗ ಭೈರವಿ. ತ್ರಿಪುಟತಾಳ.

ಎಂದು ಕಾಂಬೆನು ನಂದಗೋಪನ ಕಂದ ಶ್ರೀಗೋವಿಂದನ । ಮಂದರಾಚಲಧರ ಯದೂಕುಲಚಂದ್ರ ಗುಣಗಣಸಾಂದ್ರನ ॥ ಪಲ್ಲ ॥ ವಿಜಯಸೂತನ ವಿಶ್ವಪಾಲನ ಭುಜಗವರಪರ್ಯಂಕನ । ರಜನಿಚರರಳಿದಜನ ಜನಕನ ತ್ರಿಜಗಪತಿ ದ್ವಿಜಗಮನನ ॥ ೧ ॥ ಪಾಲು ದಧಿ ನವನೀತ ಚೋರನ ಬಾಲಕೃಷ್ಣ ಗೋಪಾಲನ । ಶೈಲ ಬೆರಳಲಿ ತಾಳಿ ಗೋಕುಲ ಪಾಲಿಸಿದ ಪರಮಾತ್ಮನಾ ॥ ೨ ॥ ಭಾಮೆ ರುಕ್ಮಿಣಿ ರಮಣ ರಂಗನ ಸಾಮಗಾನವಿಲೋಲನ । ಶ್ರೀಮದಾನಂದಮುನಿಕರಾರ್ಚಿತ ಶ್ಯಾಮಸುಂದರವಿಠಲನ ॥ ೩ ॥ ಶ್ರೀಃ ॥

## ೧೮೫. ರಾಗ ಕಾಂಬೋಧಿ. ಝಂಪೆತಾಳ.

ಗಂಧವಾಹನ ಮತವ ಪೊಂದದವರೂ । ಹಂದಿ ನಾಯಿಗಳಾಗಿ ಬಹು ಕಾಲ ಕಳದಂತೆ ॥ ಪಲ್ಲ ॥ ಇಳೆಯಾಣ್ಮನಿಲ್ಲದ ನಾಡು ಶೋಭಿಸಿದಂತೆ । ಜಲವಿಲ್ಲದ ವಾಪಿ ಕೂಪದಂತೆ ॥ ನಳಿನಬಾಂಧವಮಿತ್ರನುದಯಿಸದ ದಿನದಂತೆ । ಕುಲಹೀನ ಮಾನವರ ಸಂಗವಂತೆ ॥ ೧ ॥ ಕೋಣದ ಸಮ್ಮುಖದಿ ವೀಣೆಬಾರಿಸಿದಂತೆ । ಜಾಣತನವಿಲ್ಲದಾಮಾತ್ಯನಂತೆ ॥ ಮಾನವನು ಕಳಕೊಂಡ ಮಾನವನ ತೆರದಂತೆ । ವಾನರನ ಕೈಯಲ್ಲಿ ಮಾಣಿಕವ ಕೊಟ್ಟಂತೆ ॥ ೨ ॥ ಶ್ಯಾಮಸುಂದರ ನಾಮ ವರ್ಣಿಸದ ಕವಿಯಂತೆ । ಪಾಮರಗೆ ಪುರಾಣ ಪೇಳಿದಂತೆ ॥ ಕಾಮಾದಿ ಗುಣ ಬಿಡದೆ ಸನ್ಯಾಸಿಯಾದಂತೆ । ಕೋಮಲಾಂಗದ ಸತಿಗೆ ಕ್ಲೀಬ ದೊರತಂತೆ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೮೬. ರಾಗ ಆನಂದಭೈರವಿ. ಆದಿತಾಳ.

ರಂಗನ ನೋಡಿರೈ ಮಾನವ ಸಿಂಗನ ಪಾಡಿರೈ । ಪಲ್ಲ ॥ ಇಂಗಡಲಜ ಪತಿ ಮಂಗಳಚರಿತ ಭುಜಂಗಶಾಯಿ ಶುಭಾಂಗ ॥ ಅನುಪಲ್ಲ ॥ ವಸುಗ ರ್ಭಾದಿಗಳ್ ಮೊರೆಯನು ಲಾಲಿಸಿ ದೇವ ಮಹಾನುಭಾವ । ವಸುದೇವನ ಸತಿಯುದರದೊಳವತರಿಸಿದನೂ ಅಸುರಾಂತಕನೂ ॥ ಪಶುಗಳ ಸಲಹಿದ ಕುಸುಮನಯನ ಪ್ರೇಮದಲಿ ಗೋಕುಲದಲಿ । ಶಿಶುಪಾಲಾದಿಗಳಸು ಸೀಗಿದ ಯದುನಾಥ ವಿಧುಕುಲಜಾತ ॥ ೧ ॥ ತಂದೆಯ ತಾಯಿಗಳ ಬಂಧನ ಬಿಡಿಸಿದ ಧೀರಾ ಭಕ್ತಮಂದಾರ । ಒಂದೆ ಬೆರಳಲಿ ಗೋವರ್ಧನ ಶೈಲವನೂ ತಾ ಧರಿಸಿದನೂ ॥ ವೃಂದಾರಕಪತಿಗೊದಗಿದ ಮದವನು ತರಿದಾ ಮೋದವ ಗರಿದ । ಸಿಂಧುಶಯನ ತನಘೊಂದಿದ ಶರಣರ ಕರವ ಕರವ ಕರುಣದಿ ಪಿಡಿವಾ ॥ ೨ ॥ ಸಾಮವೇದ್ಯ ಬಲರಾಮಾನುಜ ಹರಿ ಶ್ವೇತವಾಹನಸೂತ । ಕಾಮಜನಕ ಸತ್ಯಭಾಮೆರಮಣ ಗೋಪಾಲ ಸ್ವಾಮಿಕುಲಾಲ ॥ ಭೀಮಗೊಲಿದ ನಿಸ್ಸೀಮ ಮಹಿಮ ಶ್ರೀಶೌರೀ

ಮಾತುರವೈರಿ ॥ ಹೇಮಾಂಬರರಿಪು ರಾಮಸುಂದರವಿಠಲಾ ಧೃತವನ ಮಾಲಾ ॥ ೩ ॥ ಶ್ರೀಃ ॥

೧೮೭. ರಾಗ ಕಾಂಬೋಧಿ, ಝಂಪೆತಾಳ. (ಒಗಟು)

ಲಕ್ಷ್ಮೀಕಾಂತನೆ ಯೆನ್ನ ರಕ್ಷಿಸಯ್ಯಾ । ಅಕ್ಷಯಾಂಬರಧರಾ ಧವನ ದೂತನ ಮಾಡಿ ॥ ಪಲ್ಲ ॥ ಅಂಧಕಾನುಜನ ಕಂದನ ತಂದೆಯಾ । ತಿಂದ ವೈರಿಯ ಅನುಜನಾ ಹಿಂದೆ ॥ ನಿಂದವನ ಕಂದನಾ ಕೊಂದವನ ತಂದೆಯಾ । ತಂದೆಯಾ ತಂದೆಯ ತಂದೆಯಾದೀ ॥ ೧ ॥ ಮಗಳಿಗೆ ಮಗನಾದಿ (ಮತ್ಸ್ಯ) ಮಗಳ (ಸೀತಾ) ಅತ್ತೆಯ (ಭೂ) ಕೂಡ್ದಿ । ಮಗಳ ಗಂಡಗೆ (ಸಮುದ್ರ) ಮಾವ ಅಳಿಯನಾದೀ ॥ ಮಗಳವೈರೀಪಿತನ ಹಗೆಯಭೂಷಣವೈರಿ । ಪೆಗಲನೇಲೇ ಯೇರಿ ಚಿಗಿವ ದೇವಾ ॥ ೨ ॥ ಅತ್ತೆಗೆ ಸುತನಾದಿ ಅತ್ತೆಗೆ ಪಿತನಾದಿ । ಅತ್ತೆಯ ಗಂಡಗೆ ವೈರಿಯಾದೀ ॥ ಅತ್ತೆಯನೆ ಯೆತ್ತಿದಿ ಅತ್ತೆಯನೆ ಭ್ರಮಿಸಿದಿ । ಹೆತ್ತಂದೆ ಗುರುಗೋಪಾಲವಿಠಲನೇ ॥ ೩ ॥ ಶ್ರೀಃ ॥

೧೮೮. ಕನ್ನಡ ಲಘುವಾಯುಸ್ತುತಿ.

ಶ್ರೀಮದ್ವಿಷ್ಣ್ವಾಜ್ಞದಿಂದ ಜನಿಸಿ ಪವನನೂ ಕೇಸರೀಕ್ಷೇತ್ರದಲ್ಲೀ ಕಂಜಾಕ್ಷೀ ಸೀತೆಗಾಗಿ ಲವಣಜಲಧಿಯಂ ಲಂಘಿಸಿ ಲಂಕೆಯಲ್ಲೀ ॥ ಇಷ್ಟಂಥಾ ರಾವಣನ್ನು ರಘುಪನ ಕರದಿಂ ನೀಗಿಸಿ ಭೂಮಿಯಿಂದಾ । ಕೂಡಿದ್ದಾ ರಾಘವನ್ನಾ ಭಜಿಸಿ ಮೆರದೀ ಕಿಂಪುರುಷಾ ಖಂಡದಲ್ಲೀ ॥ ೧ ॥ ಆ ವಾಯೂ ಭೀಮನಾಗಿ ಸುರವರ ಬಲದಿಂ ಕೋವಿದಾ ಮಾಗಧನ್ನ । ಕಿರ್ಮೀರರಂ ಕೀಚಕನ್ನ ಬಕಮುಖ ಖಳರಂ ದುಷ್ಟ ದುರ್ಯೋಧನನ್ನೂ ॥ ಕೊಂದೂ ರಾಜಾಶ್ವಮೇಧಾ ಪ್ರಮುಖ ಮಖಗಳಂ ಮಾಡಿ ಕೃಷ್ಣಾರ್ಪಣೆಂದೂ । ರಾಜಾಧಿರಾಜನಾಗಿ ಸುಜನರಪತಿಯು ಮೆರದನೂ ಸಾಧುಬಂಧೂ ॥ ೨ ॥ ಪ್ರಾಗ್ಜನ್ಮದ್ವೇಷದಿಂದ ಕಲಿಯುಲಿ ಮಣಿಮಾನ್ ಸಂಕರಾಚಾರ್ಯನಾಗಿ । ಬ್ರಹ್ಮಾಹಂ ನಿರ್ಗುಣೋಽಹಂ ವಿತಥವಚನದಿಂ ಎಲ್ಲರಂ ಕೆಡಿಸಲಾಗೀ ॥ ಅಜ್ಞಾನಾಖ್ಯಂಧದಿಂದ ಸುಜನರ ಮತಿಯು ಮ್ಲಾನವಂ

ಪ್ಪೊಂದಿರಲೂ । ಶ್ರೀಶಾಜ್ಞ ಶಿರದಿ ವಹಿಸಿ ಕುರುಕುಲಪತಿಯೂ ಅದನೂ
ಮಧ್ವಸೂರ್ಯರ ॥ ೩ ॥ ಸರ್ವಜ್ಞ ಶ್ರೀಶನೇವೇ ವಿಧಿಭವಮುಖರೂ
ಶ್ರೀಕಾಂತೇದಾಸರೇವೇ । ಸತ್ಯಾವೇ ಈ ಜಗತ್ತೂ ಜನವು ತ್ರಿವಿಧವು ನಿತ್ಯ
ಪಂಚಪ್ರಭೇದಾ ॥ ಈಶಾಧೀನಾವೆ ಸರ್ವ ಶ್ರುತಿಸಿದನು ಗುಣಾ ಅಂತ
ದೇವೇ ಪ್ರಮಾಣಾ । ಹೀಗೆಂದೂ ಮಧ್ವಸೂರ್ಯರ ತಿಳಿಸಿ ಸುಜನರಕೇ
ಆದನೂ ದಿವ್ಯ ವೋದಾ ॥ ೪ ॥ ಕೇಳೆಂದೂ ಮಾಯಾವಾದೀ ಸಕಲ
ಸುರಪನೂ ವಂದಿಗಳ್ಯಜ್ಞನಲ್ಲಾ । ಜಿಜ್ಞಾಸ್ಯ ಬ್ರಹ್ಮ ನಾರಾಯಣ ಸಕಲ
ಜಗತ್ಪರಿಮಿತಿಯನ್ನೂ ಬಲ್ಲಾ । ನೀನರಿಯೋ ನಿನ್ನ ನಾರೀ ಹಗಲು ಇರು
ಳಲೀ ಜಾರವಾ ಮಾಡುವೋದು । ಬ್ರಹ್ಮಾಹಂ ನಿರ್ಗುಣೆಂಬೋ ವಿತಥ
ವಚನವೂ ಹ್ಯಾಂಗೆ ನೀ ಆಡುವೋದು ॥ ೫ ॥ ಮಾಯಾವಾದಿಗೆ ಮಾನ
ಜನಕೇ ಶುದ್ಧಿಲ್ಲದ ನಾಯಿಗೇ । ಮಾಯಿಾ ಸಂಕರಗೇ ಸನಿವಾರಣಗವಾ
ಪೆಟ್ಟೆಂದಲೇ ಮುಕ್ತಿಯೂ ॥ ನಿತ್ಯಂಧಾತಮಹುದೆಂದು ತಿಳಿದು ಅಜ್ಞಾನ
ವಂ ವರ್ಜಿಸಿ । ಶ್ರೀಮುದ್ರಾಸಹ ಗೋಪಿಚಂದನವನೂ ದೇಹಂಗ
ಳಲ್ಲಿ ಚ್ಚಿಸೀ ॥ ೬ ॥ ಶ್ರೀಶ ॥

ಇತಿ ಶ್ರೀವಾದಿರಾಜಯತಿವಿರಚಿತ ಕನ್ನಡ ಲಘುನಾಮಸ್ಮೃತಿ ಸಮಾಪ್ತಾ.

## ೧೮೯. ಲಾವಣೀ.

ಗೋಕುಲದೊಳಗೆ ಗೋವಿಂದನು ತಾ ಲೀಲೆಯೊಳಿರಲೂ । ಬೇಕಾ
ದವರೊಳು ಆಡುತ ಪಾಡುತ ಕ್ರೀಡೆಯೊಳ್ತಾನಿರಲೂ ॥ ಪಲ್ಲ ॥ ಅವರೊ
ಳಗೊಬ್ಬಳು ಚದುರೆನಾಯಕೀ ಸದನದೊಳಿರುತಿಹಳೂ ಮದಗಜಗಾ
ಮಿನಿ ಸೊಬಗಿನ ಚೆಲುವೆ ಪದುಮಜಾತಿಯವಳೂ ॥ ೧ ॥ ಬಟ್ಟಕುಚದ
ಭಾರಕೆ ನಡುವೂ ಬಳಕುತಲಿರುತಿಹಳೂ । ದಿಟ್ಟ ಗೋಪಾಲನ ಕಂಡರೆ
ಮನದಲಿ ಲೆಕ್ಕಿಸದಿರುತಿಹಳೂ ॥ ೨ ॥ ಕನ್ನಡಿಯಂದದಿ ಕದಪಿನ ಬೆಳಕೂ
ಹುಲ್ಲೆಗಂಗಳ ನೋಟಾ । ಪನ್ನಗವೇಣಿ ಕೋಕಿಲವಾಣಿ ಚಂದನಾಸಿಕ
ದಿಟ್ಟಾ ॥ ೩ ॥ ಮದನಚಾಪವ ಸೋಲಿಪ ಪುರ್ಬು ಮಡಿಯು ಹಿಮ್ಮಡಿ
ಸೋಂಕೆ ಸದನವ ಬಿಟ್ಟು ನೆರಮನೆ ಹೊರಮನೆಗೆಂದೂ ಬಾರಳಾಕೆ ।

॥ ೪ ॥ ಇರುತಿರೆ ಒಂದಿನ ಅತ್ತೆಬದಿಯಲಿ ನಿಂತು ಕೇಳಿದಳೂ । ನೆರಮನೆ ಗೆಳತಿರ ಸಂಗಡ ಮಧುರೆಗೆ ಹೋಗಿಬರಲೆ ಪೇಳೂ ॥ ೫ ॥ ಹಾಲು ಮೊಸರು ಬೆಣ್ಣೆಯ ಮಾರಿ ಬೇಗದಿ ಬಹೆ ನಾನೂ । ಸಾಲವ ಕೊಡದೆ ಕೈಯಲಿ ರೊಕ್ಕವ ತರುವೆ ಯೆಂಬುದನೂ ॥ ೬ ॥ ಪೋಗಲು ಬ್ಯಾಡವೆ ಹಾದಿಯ ಪೊಳಗೆ ಗೋಪಾಲನು ತಾನಿಹನೂ । ಗೆಳೆತೆಯರೆಲ್ಲರ ತಪ್ಪಿಸಿ ನಿನ್ನ ಹಗರಣ ಮಾಡುವನೂ ॥ ೭ ॥ ಹಗರಣ ಮಾಡಲು ಬಂದರೆ ನಾ ತಳವಾರಘೋಳುವೆನೂ । ಜಗಳವ ಮಾಡಿಬಿಡದೆ ಸುಮ್ಮನೆ ಬರುವಳಲ್ಲ ನಾನೂ ॥ ೮ ॥ ತಿಪ್ಪಿರೂಪಿನ ಚಲುವೆಯ ಕಂಡರೆ ಮುದ್ದಾಡದೆ ಬಿಡನಲ್ಲೆ । ಮುಟ್ಟಿಡಬಂದರೆ ನಾನು ಅವನ ಗುದ್ದಿ ನೂಕಲು ಬಲ್ಲೆ ॥ ೯ ॥ ದಿಟ್ಟ ಗೊಲ್ಲತಿಯೆಂದು ನಿನ್ನ ಬಟ್ಟಕುಚಗಳನ್ನು । ಘಟ್ಯಾಗಿ ಪಿಡಿದೂ ಒತ್ತುತಲಿರುವ ದಿಟ್ಟನು ತಾನವನೂ ॥ ೧೦ ॥ ಪಿಡಿಯಲು ಬಂದರೆ ಬಡಿವೆನು ಅವನಾ ತುಡುಗುತನಗಳೆಲ್ಲಾ । ಬಿಡದೋಡಿಸುವೆನು ಬೆಡಗುಗಳೆಲ್ಲ ಸರಸ ಯೆನ್ನೊಳು ಸಲ್ಲಾ ॥ ೧೧ ॥ ಹಿಂದೆ ಬಂದು ನಿನ್ನ ತಬ್ಬಿಹಿಡಿದು ಮುಂದಕೆ ಬಿಡನಲ್ಲೆ । ಸುಂದರಿಯೆಂದು ತನ್ನ ಕೆಲಸವ ಮಾಡದೆ ಬಿಡನಲ್ಲೆ ॥ ೧೨ ॥ ಮಾಡಲು ಬಂದರೆ ಊರನಾಳುವ ದೊರೆಗಳೂ ಯೆಲ್ಲ ಅವನಿಕ್ಕಿದ ಬಂಟರಲ್ಲವೇ । ............................ ॥ ೧೩ ॥ ಇಷ್ಟುಬಗೆಯಲಿ ನುಡಿಯಲು ಅತ್ತೆಮಾತನು ತಾ ಕೇಳಿ । ಮುಟ್ಟಿ ತಿಳಿದು ನಾ ಬರುವೆನು ಯೆಂದು ಹರುಷವ ತಾಳಿ ॥ ೧೪ ॥ ಯೆಣ್ಣೆ ಮಂಡೆಗೆ ಹಚ್ಚಿಸಿ ಹಣಿಯಲಿ ಬಾಚಿಕೊಂಡಳಾಗಾ । ಕನ್ನಡಿ ಪಿಡಿದು ಸಣ್ಣಗೆ ಬೈತಲೆ ತಿದ್ದಿದಳ್ ತಾನಾಗಾ ॥ ೧೫ ॥ ರನ್ನದ ರಾಗಟೆ ಚೌರಿ ಕ್ಯಾದಿಗೆ ಹಚ್ಚಿಸಿ ತಾ ಬಿಸದೂ । ಚನ್ನಾಗಿ ಜಡೆಯ ಭಂಗಾರ ಹಾಕಿದಳು ತಾನೊಲಿದೂ ॥ ೧೬ ॥ ವಜ್ರದ ಮುತ್ತಿನ ಬೊಟ್ಟನು ಇಟ್ಟಳು ಚಂದ್ರಸೂರ್ಯರುಗಳ । ....................... ॥ ೧೭ ॥ ಮುತ್ತಿನ ವಾಲೆ ಮೂಗುತಿಯಿಟ್ಟು ಕಟ್ಟಾಣಿ ತಾ ಬಿಗಿದೂ । ಮತ್ತೆ ಯಿಟ್ಟಳು ಸರಿಗೆ ಗುಂಡುಸರಗಳ ತಾನೊಲಿದೂ ॥ ೧೮ ॥ ತೋಳಬಂದಿಯು ಕಂಕಣ ಚೂಡವುಂಗುರಗಳನಿಟ್ಟು । ಶೀರೆಯನುಟ್ಟಳು ಕುತ್ತಣಿ ಕಿಂಕಾಪಿನ ಕುಪ್ಪಸ ತಾ

ಕೊಟ್ಟೊ ॥ ೧೯ ॥ ಧಣಿಧಣಿರೆನ್ನುತ ಮೊರೆವ ಕಾಲುಂಗುರ ಮುಂಟಿಗೆ ಪಿಲ್ಲಿ ಬೇಗಾ । ಮಣಿಮಣಿ ಚಿನ್ನದಪಟ್ಟಿ ನಡುವಿಗೆ ಇಟ್ಟಳು ತಾನಾಗಾ ॥ ॥ ೨೦ ॥ ಬೆಡಗುಮಾಡುತ ಕಡ್ಡಿಲಿ ತಿಲಕವನಿಟ್ಟಳು ಶುಕವಾಣೀ । ಕುಳತೆ ಗಣ್ಣಿಗೆ ಗರುಗದ ಕಪ್ಪಾನಿಟ್ಟಳು ಸುಪ್ಪಾಣೀ ॥ ೨೧ ॥ ಈ ವಿಧದಿಂದಲಿ ಶೃಂಗಾರವಮಾಡಿ ಮುಟ್ಟು ತಾ ತೆಗದೂ । ಗೋವಿನಬೆಣ್ಣೆ ಪಾಲುಮೊಸ ರುಗಳ ಇಟ್ಟಳು ತಾನೊಲಿದೂ ॥ ೨೨ ॥ ಅತ್ತೆಗೆ ಹೇಳಿದಳ್ ಹಾಲು ಮೊಸರು ಹೊತ್ತುಹೋಗುತ್ತೇನೆ । ತತ್ತರವಾಡದೆ ಗೆಳತೆರ ಸಂಗಡ ಹೊತ್ತಿಲೆ ಬರುತೇನೆ ॥ ೨೩ ॥ ಎನ್ನುತ ನಡದಳು ಯಮುನಾತಟಕೆ ಬಿನ್ನ ಬಿನ್ನಣದಿಂದಾಲಿ । ಸನ್ನುತಾಂಗಿಯರೆಲ್ಲರು ಕೂಡಿ ತರುವಿನ ನೆರಳಲ್ಲಿ ॥ ॥ ೨೪ ॥ ಆ ಸಮಯದಲಿ ಗಂಡನಂದದಿ ಬುಟ್ಟಿಯು ತಾ ಪೊತ್ತೂ । ಈಶನು ಬಂದನು ಕಂಬಳಿ ಕೊಪ್ಪೆ ಕಾಲಿಗೆ ಕಟವಿಟ್ಟೊ ॥ ೨೫ ॥ ಚಲ್ಲಣ ಕೊಟ್ಟು ದಟ್ಟಿಯು ಬದಿಗೆ ಗಟ್ಯಾಗಿ ತಾ ಸುತ್ತೀ । ಮೆಲ್ಲನೆ ಬರುತಾ ಬಾಯಿಲಿ ತಾಂಬುಲ ಗಲ್ಲದಿ ತಾನೊತ್ತೀ ॥ ೨೬ ॥ ಗೊಲ್ಲರಮಗನು ಬಲ್ಲಿದ ನೆಂದು ಗಂಧವ ತಾ ಪೂಸೀ । ಚಲ್ವೆ ಕಂಡ ನಗೆಮೊಗದಲಿ ಹುರಿಯು ಮಾಡಿದ ವಿಲಾಸೀ ॥ ೨೭ ॥ ಎಂದು ಬಾರದಾಕೆಯಿಂದ್ಯಾಕೆ ಬಂದೆ ವೀಳ್ಯವ ತಾಯೆಂದೂ । ಹೊಂದಿ ಕುಳಿತನು ಚೀಲವ ತಾರೆಂದು ವೈಯೊಲ್ಲ ಹುಡು ಕುತಲೀ ॥ ೨೮ ॥ ಮಧುರೆ ಪ್ಯಾಟೆಗೆ ಗೆಳತೆಯರೆಲ್ಲ ಮಧುಮಾರೆ ಹೋ ಗೆಂದು । ಚದುರ ಗೋಪಾಲನು ಎದೆಬದಿ ಮುಟ್ಟುತ ಮುತ್ತಕೊಟ್ಟೆ ನಾಗಾ ॥ ೨೯ ॥ ಇಲ್ಲಿಗೆ ಬಾರೆ ಮಲ್ಲಿಗೆ ಹೂವ್ವು ಸಂಪಿಗೆ ಮೇಲಾಗಿ । ವಲ್ಲಭೆ ನಿನಗೆ ಹಾರವ ಕಟ್ಟಿ ಮುಡಿಸುವೆ ನಿನಗಾಗೀ ॥ ೩೦ ॥ ಪರಿಮಳ ಜಾಜೀ ಕೇದಿಗೆ ಮರುಗ ಸರಗಳ ತಾ ಕಟ್ಟೀ । ಅರಳಿದ ಶ್ಯಾವಂತಿಗೆ ಮಲ್ಲೆ ಸುರಗಿ ಮುಡಿಸಿದ ತಾ ಮುಟ್ಟೆ ॥ ೩೧ ॥ ಭಾವಕಿರನ್ನೆ ನಿನ್ನ ಮೇಲೆ ಮನಸಾಯಿತು ಈಕ್ಷಣದೀ । ತಾವಿಗೆ ಬಾರೆಂದು ಕರವನು ಪಿಡಿದು ಪೋದರು ಅತಿತ್ವರದೀ ॥ ೩೨ ॥ ತಳಿರುಹಾಸಿಗೆ ಪರಿಮಳಪುಷ್ಪದ ತಂಪಿನ ನೆರಳಲ್ಲೀ । ನಳಿನಾಕ್ಷಿ ಬಾರೆಂದು ಸರಸಸಲ್ಲಾಪವ ಮಾತಾಡು ತಲ್ಲಿ ॥ ೩೩ ॥ ವಲ್ಲಭನೆಂದು ಸಲ್ಲಾಪದಿಂದ ಮನವನಿತ್ತಳಾಗ । ಚೆಲ್ವೆಯು

ಕುಪ್ಪಸಗಂಟನು ಬಿಚ್ಚಿ ಕರದಿ ಪಿಡಿದನಾಗ ॥ ೩೪ ॥ ಹಾವಭಾವದ ವಿಲಾಸವ ಮಾಡೀ ರತಿಯನು ತಾ ಕೊಟ್ಟೂ । ಆವ ಜನ್ಮದಿ ಮಾಡಿದ ಸುಕೃತವು ಬಂದಿತು ನಿನಗಿಷ್ಟೂ ॥ ೩೫ ॥ ಎನ್ನುತ ನಿಂದನು ನಾಲ್ಕು ಭುಜದಿ ಶಂಖಚಕ್ರಧಾರೀ । ಚಿನುಮಯಮೂರುತಿ ಗದೆಯು ಪದುಮವ ಕೈಯಲಿ ತಾ ತೋರೀ ॥ ೩೬ ॥ ಮಣಿಯ ಮಕುಟವು ಕರ್ಣಕುಂಡಲ ಫಣೆಯೊಳಿಟ್ಟ ತಿಲಕಾ । ಮಿನುಗುವ ಕೌಸ್ತುಭ ಶ್ರೀವತ್ಸ ಮುಕ್ತಾ ಹಾರವೂ ಪದಕಾ ॥ ೩೭ ॥ ಪಚ್ಚೆಪದಕ ವುಟ್ಟ ಪೀತಾಂಬರ ಕಂಕಣ ಉಂಗುರದ ಬೆರಳುಗಳಾ ॥ ದೃಷ್ಟಿಸಿ ಕಂಡಳು ಕೃಷ್ಣಮೂರ್ತಿಯ ದಿಟ್ಟನ ಸೊಗಸುಗಳಾ ॥ ೩೮ ॥ ಏನುಮಾಡಿದೆ ಕಪಟನಾಟಕ ವೊಲುಮೆಯ ಬಲುಬಗೆಯಾ । ದಾನವಾಂತಕ ಮರುಳುಮಾಡಿ ಯೆನ್ನ ನೆರಿದೆಯೊ ಮಹಾಮಹಿಮಾ ॥ ೩೯ ॥ ಮುದ್ದುಮೋಹನ ಮದನನ ತಂದೆ ಬಿದ್ದೆ ನಿನ್ನ ಬಾಲೆಯಾ । ಎದ್ದುಬಂದಳು ಹರಿಯ ಚರಣಕೆ ಚಾಚಿದಳ್ತಲೆಯಾ ॥ ೪೦ ॥ ಜಯಜಯ ಲಕ್ಷ್ಮೀರಮಣ ಗೋವಿಂದ ಜಯಜಯ ಆನಂದ । ಜಯ ಜಯ ಗೋಕುಲದರಸಾ ಭಕ್ತರ ಪ್ರಮೇಯ ಮುಚುಕುಂದಾ ॥ ೪೧ ॥ ಉನ್ನತೋನ್ನತಮಹಿಮ ನೀ ಯೆನ್ನ ಅವಗುಣಗಳ ನೋಡದೆ। ಮನ್ನಿಸಿ ಯೆನಗೆ ಅಂಗಸಂಗವನಿತ್ತೆಯೊ ಬಿಡದೆ ॥ ೪೨ ॥ ಮುನ್ನಿನ ರೂಪಿನ ಹಲುವ ಕೃಷ್ಣನ ಕಂಡಳು ತಾನಾಗ । ಇನ್ನು ನಿನ್ನನೆ ನಂಬಿದೆ ಯೆನ್ನಾ ಸಲಹೋ ಯೆನುತಾಗಾ ॥ ೪೩ ॥ ಬಂಡುಮಾಡಲುಬೇಡ ಪುಂಡರೀಕಾಕ್ಷನೆ ಅತ್ತೆ ಮಾವ ಯೆನಗೆ । ಅಂಡಜವಾಹನ ಅತ್ತಿಗೆ ಭಾವ ವೈದುನ ರಿಹರೆನಗೆ ॥ ೪೪ ॥ ಇಷ್ಟು ಬಳಗವು ನಂಟರ ವೊಳಗೆ ನಾ ಶಿಷ್ಟಳು ಎಂದೆನಿಸಿ । ಗುಟ್ಟುಮಾಡು ನೀ ಮುಟ್ಟಿ ಮುರಾಂತಕ ಜಾಣರಜಾಣನೆನಿಸೀ ॥ ॥ ೪೫ ॥ ಹಾಲುಮೊಸರು ಬೆಣ್ಣೆಯನಿತ್ತು ಬೇಡಿಕೊಂಡಳಾಗಾ । ಜಾಲವ ಮಾಡದೆ ನೀನನವರತ ಅಗಲಬೇಡರೆಫಳಿಗೆ ॥ ೪೬ ॥ ಮಧುರೆಪ್ಯಾಟೆ ಕೇರಿಗಳಲ್ಲಿ ಮಧುವ ಮಾರಿಕೊಂಡು । ಚದುರೇರೆಲ್ಲ ಬರುವರ ಸಂಗಡ ಬೇಗದಿ ಮುಂಕೊಂಡು ॥ ೪೭ ॥ ಎಷ್ಟುಹೊತ್ತಿಗೆ ನೆರದರೆ ನಿನ್ನಾಭೀಷ್ಟವ ಸಲಿಸುವೆನು। ಬಿಟ್ಟಿರಲಾರೆನು ಅರೆಘಳಿಗೆನ್ನ ನೆನಿನೆನಿಸು ಸಂತತದನೂ ॥

॥ ೪೮ ॥ ಬಂದಳು ಗೆಳತೆರ ಸಂಗಡ ಮನೆಗೆ ಮುಶಿಮುಶಿ ನಗೆನಗುತಾ । ಎಂದಿನಂತೆ ತಾನತ್ತೆಬದೀಲಿ ನಿಂತಳು ತಾನಲ್ಲೀ ॥ ೪೯ ॥ ನೋಡಿದಳೀ ಕೆಯು ಮನವನೆ ಕಂಡು ಬೇಗದಿ ತಾನಾಗಾ॥ ಝಾಡಿಸಿ ಹಾಲುಮಾರಿದ ರೊಕ್ಕವ ತೆಗದಳು ತಾನಾಗಾ ॥ ೫೦ ॥ ನಿನ್ನ ನೋಡಲು ಕದಡಿದ ಕಪ್ಪು ಪಣೆಯೊಳಿಟ್ಟ ತಿಲಕಾ । ಪನ್ನಗವೇಣಿ ಕೆದರಿದ ಕುರುಳು ಹರಿದಿದೆ ತಾ ಪದಕಾ ॥ ೫೧ ॥ ಪರಿಮಳ ಪುಷ್ಪದ ಸರಗಳು ಯಾರು ಮುಡಿಸಿದರೆಲೆ ಭಾಮೆ । ಸರಿಯಾಗಿ ನೋಡಲು ಹಲ್ಲಿನ ಘಾಯ ಅಧರದಿ ಕಾಣುತದೆ ॥ ॥ ೫೨ ॥ ಅಲ್ಲಲ್ಲಿ ಉಗುರಿನ ಘಾಯ ಸಲ್ಲಾಪವ್ಯಾರೊಡನೆ । ಮೆಲ್ಲಗೆ ನೀ ಯೆನ್ನೊಡನೆ ನಿಲ್ಲದೆ ಹೇಳೆ ಯೇನಾಯಿತು ॥ ೫೩ ॥ ಬಳಲಿಕೆ ಮುಖದಲಿ ಗಲ್ಲವು ಗೀರಿದೆ ನೆರಿಯು ಸಡಲಿದೆ । ದೃಷ್ಟಿಯು ಅವನಲ್ಲಿ............... ॥ ೫೪ ॥ ಮೊದಲೆ ಹೇಳಿದೆ ಗೆಳತೆರ ಸಂಗಡ ಹೋಗಬ್ಯಾಡವೆಂದೂ । ಮುದದಿಂದ ಮನ್ನಿಸಿ ಒತ್ತಿಲಿ ಕುಳಿತು ಕೇಳಿದಳೆ ಹ್ಯಾಗೆಂದೂ ॥ ೫೫ ॥ ಮುಡಿಯನು ತಿದ್ದಿ ಮುಖವನು ವರಸಿ ನ್ಯೆಯನು ತಡವರಿಸಿ । ತೊಡೆ ಯಮೇಲಿಟ್ಟು ಮುದ್ದಿಸಿ ಕೇಳಲು ಹೇಳಿದಳನುಸರಿಸೀ ॥ ೫೬ ॥ ತರುಣಿ ಯರೆಲ್ಲರು ನೆರಳಲಿ ಕುಳಿತು ಮಾತನಾಡುತಲ್ಲೀ । ಪುರುಷನಂದದಿ ಬುಟ್ಟಿಯ ಪೊತ್ತು ಬಂದನು ತಾನಲ್ಲೀ ॥ ೫೭ ॥ ವಲ್ಲಭನೆಂದು ತಲೆಯ ತಗ್ಗಿಸಿ ನಿಂದೆನು ತಾನಾಗೇ । ಚಲ್ವೆಯರೆಲ್ಲ ಮಧುರೆಪ್ಯಾಟೆಗೆ ನಿಲ್ಲದೆ ತಾ ಪೋಗೇ ॥ ೫೮ ॥ ಶಿರಗನು ಪಿಡಿದು ಪರಿಮಳಪುಷ್ಪವ ಮುಡಿಸಿದ ತಾ ಕೈಲಿ ॥ ಕರವನು ಪಿಡಿದು ಮಧುರೆಗೆ ಬಾರೆಂದು ತಂಪಿನ ನೆರಳಲ್ಲೀ ॥ ॥ ೫೯ ॥ ಪ್ರಾಯವು ಸಾಲದು ಯೆಂದು ಪೇಳಿದೆ ಆಗಲೆ ಅವನೊಡನೇ । ಪ್ರಾಯದಿ ಪ್ರಾಯವು ಪುಟ್ಟಿಸಿ ಮೋಹದಿ ನೆರೆವೆನು ನಿನ್ನೊಡನೇ ॥ ೬೦ ॥ ಸುರತಕ್ರೀಡೆಯ ಸುಗ್ಗಿಯ ತೋರಿಸಿ ನಿಂದನು ತಾನಾಗಾ । ಕರದಿ ಶಂಖವು ಚಕ್ರ ಗದೆಯು ಪದುಮವ ತಾ ಬೇಗಾ ॥ ೬೧ ॥ ತುಲಸಿದಂಡೆ ಮಣಿಮಯ ಮಕುಟ ಹಾರಪದಕವಿಟ್ಟು । ಚದುರ ಗೋಪಾಲನು ಅಂಗಿ ಪೀತಾಂಬರ ಉಡಿದಾರವ ತಾನಿಟ್ಟೂ ॥ ೬೨ ॥ ಪರಿಮಳ ಗಂಧವು ತೋಳಬಾಪುರಿ ಮುರಡಿ ಕಡೆಯಲಿಟ್ಟೂ । ಬೆರಳಲಿ ನೀಲವು ವಜ್ರದ

ಕೆಂಪು ಉಂಗುರಗಳನಿಟ್ಟ್ಯೊ ॥ ೬೩ ॥ ಕೋಟಿಸೂರ್ಯರಿಗಿಂತ ಮೆಟ್ಟಿದ ಕಾಂತಿಯೊಳಳವಟ್ಟ್ಯೊ । .. ...............॥ ೬೪ ॥ ಮುನ್ನ ಮಾಡಿದ ಸುಕೃತದ ಫಲವೂ ಬಂದಿತು ನಿನಗಿಷ್ಟ್ಯೊ । ಇನ್ನು ಗೋಕುಲಕೆ ನಡೆ ಯೆಂದು ಯೆನಗೇ ನೇಮ ತಾ ಕೊಟ್ಟ್ಯೊ ॥ ೬೫ ॥ ಆದದೆಲ್ಲವು ಪೇಳಲು ಅತ್ತೆ ಆಶ್ಚರ್ಯ ತಾ ಪಟ್ಟ್ಯೊ । ಆ ದಯಾಂಬುಧಿ ನಿಜರೂಪವನು ತೋರಿದ ದಯವಿಟ್ಟ್ಯೊ ॥ ೬೬ ॥ ಆತನ ಕಾಣದೆ ಆತುರಬಟ್ಟ್ಯೊ ಮುನಿಗಳು ತಾ ವೆಲ್ಲಾ । ಸೋತು ತಪವನು ಮಾಡಿ ಬಳಲಿದೆಂದಿಗು ಶಿಕ್ಕನಲ್ಲಾ ॥ ೬೭ ॥ ಕುಕ್ಷಿಯೊಳಗೆ ಬ್ರಹ್ಮಾಂಡವನಿಟ್ಟ್ಯೊ ಭಕ್ತವತ್ಸಲ್ಲಾ । ಲಕ್ಷ್ಮಿ ಕಳೆಯು ನಿನ್ನೊಳಗುಂಟೇ ರಕ್ಷಿಸು ನಮ್ಮೆಲ್ಲಾ ॥ ೬೮ ॥ ಈ ಕಥೆ ಕೇಳುವ ಜನರಿಗೆಲ್ಲ ಪಾತಕ ಹೋಗುವದೂ । ಲೋಕನಾಯಕ ಅಚ್ಯುತವಿಠಲನ ಪದವಿಯು ತಾ ಬಹದೂ ॥ ೬೯ ॥ ಶ್ರೀಃ ॥

## ೧೯೦. ರಾಗ ಶಂಕರಾಭರಣ, ರೂಪಕತಾಳ.

ಸಂಗವಾಗಲಿ ಸಾಧು ಸಂಗವಾಗಲಿ ॥ ಪಲ್ಲ ॥ ಸಂಗದಿಂದ ಲಿಂಗದೇಹ ಭಂಗವಾಗಲಿ ॥ ಅನುಪಲ್ಲ ॥ ಅಚ್ಯುತಾಂಘ್ರಿನಿಷ್ಠರಾ ಯ । ದೃಚ್ಛಾಲಾಭ ಸಂತುಷ್ಟರಾ ॥ ನಿಶ್ಚಯ ಜ್ಞಾನವಂತರಾ । ದಚ್ಚ ಭಾಗವತರ ನಿತ್ಯ ॥ ೧ ॥ ತಂತ್ರಸಾರ ಅಷ್ಟಮಹಾ । ಮಂತ್ರ ಪರಿಪೂರ್ಣ ಸ್ನೇಹ ॥ ಯಂತ್ರದಿಂದ ಜನಸಪ್ತ । ತಂತ್ರನ ಗುರಿಮಾಡುವರ ॥ ೨ ॥ ಪಂಚಸಂಸ್ಕಾರ ಭೇದ । ಪಂಚಕಯುಕ್ತರಾಗಿ ಪ್ರ ॥ ಪಂಚಸೂತ್ರ ಪ್ರಸನ್ನವೆಂಕಟ । ಪಂಚಬಾಣ ನಯ್ಯನವರ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೯೧. ರಾಗ ಗೌರಿ. ಅಟತಾಳ.

ನೆಲಸೆನ್ನ ಹೃದಯಮಂದಿರದಿ ನೀ । ಸಲಿಸೆನ್ನ ಮನೋಭೀಷ್ಟ ಅನುದಿನ ದಯದಿ ॥ ಪಲ್ಲ ॥ ಶಿರಿವಿರಿಂಚಿ ಮರುತ ಶಿವಾದಿ । ಸುರಾಗ್ರವಂದಿತ ಚರಣಸರಸಿಜ ॥ ಪರಮಭಕ್ತ ಪ್ರಹಲ್ಲಾದ ನಾರದ । ವರಪರಾಶರ ಮುಖ ಸುರಸನ್ನುತ ॥ ಅನುಪಲ್ಲ ॥ ನಾರುವಿ ಭಾರವ ಪೊರುವಿ । ಬಲು ।

ಬೇರುಗಳನೆ ಕಿತ್ತು ಮೆಲುವಿ । ಕರಿವೈರಿರೂಪವಗೊಂಡ ಗರ್ವಿ ಬ್ರಹ್ಮ । ಚಾರಿ ಖಳರ ಕತ್ತರಿಸುವಿ । ವೀರ ದಶರಥಗತಿಸುಹೃತ್ಸಖ । ಜಾರತನದಲಿ ವ್ರಜವ ಸಲಹುತ । ತೋರಿ ಮದವನು ತರಳ ಬಲು ಗಂ । ಭೀರ ಕುದುರೆಯನೇರಿ ಮೆರದನೆ ॥ ೧ ॥ ಅನಿಮಿಷ ಸುತಪಸಧ್ಯಾನನಾನಾವನಗ ಪಂ । ಚಾನನ ರಸದನ ವಾಮನ । ದಾನವರ ಕ್ರೊವಕದನ ನೀ । ಹೀನ ರಾವಣನ ಸಂಹನನಾ ॥ ಧೇನು ವೃಷಭಾ ಶಕಟಾಕ್ಷಮರ್ದನ । ಜ್ಞಾನದಾನ ವಿಡಂಬನಾಘನ । ಭಾನು ಮತ್ಸ್ಯಖ ಲೀನವರಕರ । ದೀನಜನ ಸುತ್ರಾಣ ನಿಪುಣನೆ ನೀ ॥ ೨ ॥ ಮಚ್ಛ ಕಚ್ಛಪ ಸ್ವಚ್ಛಕಿರಣನೇ । ಬಲು । ಅಚ್ಚಶಿಶು ಮೊರೆ ಕೇಳಿದನೇ । ಸ್ವ । ಇಚ್ಛ ವಟುಪರಶುಕರನೇ । ರಾಮ ವತ್ಸಾಸುರನ ವಧಿಸಿದನೇ ॥ ತುಚ್ಛಜನರಿಗೆ ಕಪಟಗಾರನೆ । ಹೆಚ್ಚಿದಶ್ವದ ಮೇಲೆ ವಾಳಿಪನೆ । ಮೆಚ್ಚಿ ಪುರಂದರ ವಿಠಲಾ ಪರ । ಮಚ್ಯುತಪದ ಕೊಡುವ ದೇವನೇ ॥ ೩ ॥ ಶ್ರೀ ॥

## ೧೯೨. ರಾಗ ಸುರುಟಿ. ತರಾನು.

ದಾಸರಾಗಿರೊ ವೈಷ್ಣವ ದಾಸರಾಗಿರೊ । ದಾಸರಾಗಿ ಬಯಲಾಶೆಯನೀಗಿ ರ । ಮೇಶನ ಗುಣವಾ ರಾಶಿಯೊಳಿರಿಸುವ ॥ ಪಲ್ಲ ॥ ಸುಂದರ ಮಾನಾನಂದತೀರ್ಥಮತ । ಸಾಂದ್ರ ಸುಖಾಂಬುಧಿ ಮಿಂದ ಮಹಾತ್ಮರ ॥ ॥ ೧ ॥ ದಿವ್ಯಲೋಕಜನಭವ್ಯೋಭಯವಿಧ । ಕಾವ್ಯರಚನ ಲಾತವ್ಯ ಯತೀಂದ್ರರ ॥ ೨ ॥ ಸೀತಾಪತಿ ರಘುನಾಥನ ಮನದೊಳ । ಗಾತು ಭಜಿಪ ಗಣನಾಥಜನಕನ ॥ ೩ ॥ ಶ್ರೀಮುಹೀಶ ವಟುವಾಮನ ಪದಯುಗ । ತಾಮರಸಾಶ್ರಿತ ಸಾಮಜವಾಹನ । ೪ ॥ ಶಾಕರಟಿನದೊಳ್ ಭೀಕರಮತವ ನಿ । ರಾಕರಿಸಿರುವಸುಧಾಕರಮೂರ್ತಿಯ ॥ ೫ ॥ ವಾದದಿ ಮಾಯ್ಗಳ ಬೂದಿಗೈವುತಾ । ಲ್ಹಾದ ತೋರ್ದ ಪ್ರಹ್ಲಾದಮುನೀಂದ್ರರ ॥ ೬ ॥ ತಂತ್ರದೀಪಿಕಾಯಂತ್ರವ ರಚಿಸಿದ । ಮಂತ್ರಾಲಯವರ ಮಂತ್ರದೇವತೆಯ ॥ ೭ ॥ ಗೋಪಿನಾಥನೆ ಭೂಪನೆಂದು ಸಂ । ತಾಪವ ಬಿಡಿಸುವ ಶ್ರೀಪಾದರಮತ ॥ ೮ ॥ ಮಂದಕಲಿಯ ಕಾಲಿಂದಲೊರಿಸಿದ ಪು । ರಂದರ

ದಾಸರ ಹೊಂದಿ ಹರಿಯ ನಿಜ ॥ ೯ ॥ ಸುಜನಹೃದಂಬುಜ ಸುಖಕರ ದಿನಮಣಿ । ವಿಜಯರಾಜಪದ ಭಜನೆಯ ಮಾಡುತ ॥ ೧೦ ॥ ಭಂಗುರ ಭವಭಯ ಭಂಗದ ಸುಗುಣತ । ರಂಗನ ವಲಿಸಿದ ಮಂಗಳಮಹಿಮರ ॥ ॥ ೧೧ ॥ ಹರಿಕಥಾಮೃತದ ತೆರೆಗಳೊಳಾಡುವ । ಪರತರಸಾರವ ಸುರಿದ ಮಹಾತ್ಮರ ॥ ೧೨ ॥ ಶಿಡುತರ ಸಂಸೃತಿ ಕಡಲೊಳು ಮುಳುಗಲು । ಬಿಡದಲೆ ಕೈಪಿಡಿದೊಡೆಯನ ತೋರ್ಪರ ॥ ೧೩ ॥ ಅರಿಷಡ್ವರ್ಗವ ತರಿದು ಬಿಸುಟು ಶ್ರೀ । ವರನ ಕೃಪಾರಸ ಸುರಿಸಿ ಧನ್ಯರ ॥ ೧೪ ॥ ಮೂಕನ ವಾಗ್ಮಿಯ ಮಾಡಿ ಮುರಾರಿಗೆ । ನಾಕಕೊಟ್ಟದೀ ನಾಕರದಾಸರ ॥ ೧೫ ॥ ಮಾತಿಗೆ ಕಂಸಾರಾತಿ ನಲಿಯೆ ಜಗ । ನ್ನಾಥರೆಂಬ ವಿಖ್ಯಾತಿ ಪಡದವರ॥ ॥ ೧೬ ॥ ತಾಪತ್ರಯಗಳ ತಪ್ಪಿಸಿ ವೆಂಕಟ । ಭೂಪನ ಸದಯಾರೋಪ ಗೈದವರ ॥ ೧೭ ॥ ಶ್ರೀಃ ॥

## ೧೯೩. ರಾಗ ಹುಶೇನಿ, ಏಕತಾಳ.

ಮುದ್ದಾನಿಕ್ಕಿದೇನೆ ಹರಿಗೆ ಮುದ್ದು ತುಳಸಾದೇವಿ । ಶುದ್ಧಾ ಮನದಿ ಪೂಜೀಸುವರ ಸಿದ್ಧವಾಗಿ ಕಾವಿ ॥ ಪಲ್ಲ ॥ ಕಮಲಾ ಮಲ್ಲಿಕಾದಿ ನಾನಾ ಸುಮನತತಿಗಳಿಂದ । ಕ್ರಮದಿ ಪೂಜೆಮಾಡಿ ನಿತ್ಯ ನಮಿಸೆ ಭಕ್ತಿಯಿಂದಾ ॥ ಅಮಿತಮಹಿಮ ನಿನ್ನ ಹೊರತು ಕ್ಷಮಿಸನು ಮುಕುಂದಾ । ಭ್ರಮಿತನಾದ ನಿನ್ನ ಮೇಲೆ ಕಮಲೇಶ ಗೋವಿಂದ ॥ ೧ ॥ ಆದಿಲಕ್ಷ್ಮೀದೇವಿಯನ್ನುರಾದೊಳಿಟ್ಟು ನಿನ್ನಾ । ಪಾದದಲ್ಲಿ ಧರಿಸಿದನೆಂದಾದಿಪುರುಷನನ್ನಾ ॥ ಬೋಧಿಸಿ ಕರ್ಣದಲಿ ಮಸ್ತಕಾಧಿರೋಹವನ್ನಾ । ಸಾಧಿಸಿ ತದ್ಭಕ್ತಜನರಿಗಾದಿ ಬಹುಪಾವನ್ನಾ ॥ ೨ ॥ ಸಂತತ ಹನ್ನೆರಡುಕೋಟಿ ಸ್ವರ್ಣಪುಷ್ಪದಿಂದಾ । ನಂತಾಭವದಿ ಪೂಜಿಸುವದಕ್ಕಿಂತಲಧಿಕಾನಂದಾ ॥ ಕಂತುಜನಕಗಹದು ಕೋಮಲಾಂತದಳಗಳಿಂದಾ । ಇಂತು ಶೇಷಗಿರೀಶಗಾದಿಕಾಂತೆ ಮೋಹದಿಂದಾ ॥ ೩ ॥ ಶ್ರೀಃ ॥

## ೧೯೪. ರಾಗ ಸುರುಟಿ, ಏಕತಾಳ.

ಕಾಮಿತಫಲದಾತ ಕಟ್ಟಿಯ । ಸ್ವಾಮಿ ಸೋಮನಾಥ । ಈಮಹಿಯೊಳು ನೇತ್ರಾವತಿತೀರದಿ । ನೇಮದಿ ಪೂಜೆಯ ನಿರುತದಿ ಕೊಳ್ಳುವ ॥ ಪಲ್ಲ ॥ ಅಂಬಿಕೆಯನುವರಿಸೀ । ಗಜಚ । ರ್ಮಾಂಬರವನು ಧರಿಸೀ ॥ ಶಂಬರಾರಿಯನು ಸುಲಭದಿ ಗೆಲಿದಂ । ಮೊಂಬಳ ಜನರನು ನಂಬಿಸಿ ಸಲಹುವ ॥ ॥ ೧ ॥ ಒಡೆಯನು ನೀನೆಂದೂ । ಊರಿನ । ಬಡಜನರುಗಳಿಂದೂ ॥ ಕೊಡುವ ಪೂಜೆಯನು ಮಡದಿಸಮೇತೀ । ಗಿಡದ ಬುಡದಿ ಕೊಂಬುಡು ಪತಿ ಶಿಖರ ॥ ೨ ॥ ದೋಷಗಳನು ತರಿವಾ । ಪನ್ನಗ । ಭೂಷಣ ನೀ ನೀ ಬರುವಾ ॥ ತೋಷಪಡುವ ಸಜ್ಜನರಿಗೆ ಶೇಷಗಿ । ರೀಶನು ಸಕಲಭಿಲಾಷೆಯ ಸಲಿಸುವ ॥ ೩ ॥ ಶ್ರೀಃ ॥

## ೧೯೫. ರಾಗ ಉರುಟಣಿ.

ಜಯ ಜಯ ವೆಂಕಟರಮಣ । ಜಯತು ಪನ್ನಗಶಯನ ॥ ಜಯತು ಭಾರ್ಗವಿರಮಣ । ಜಯ ಜಗದಾಧಾರಾ ॥ ಪಲ್ಲ ॥ ಲೋಕನಾಯಕ ಸ್ವಾಮಿಾ ವೈಕುಂಠದಿಂದ ಬಂದು । ಏಕಾಂತವಾಡಿದ ಲಕ್ಷ್ಮೀ ಒಡಗೂಡಿ ॥ ೧ ॥ ನವರಾತ್ರಿ ದಿನದಲ್ಲಿ ವಿವಹಾ ಲಗ್ನವು ಯೆನಿಸಿ । ಅವನಿಯೊಳಗೆ ಡಂಗುರವನ್ನು ಸಾರಿದರಾಗ ॥ ೨ ॥ ಗರುಡಾಕಂಬದ ಸುತ್ತ ಪರಿಪರಿ ವೈಭವದಿಂದ । ಗಿರಿಯ ವೆಂಕಟಗೆ ಕಂಕಣ ಕಟ್ಟಿದರಾಗ ॥ ೩ ॥ ಅತಿರಸ ಮನೋಹರ ಅಪ್ಪವೂ ಮಿತಿಯಿಲ್ಲದ ಪದಾರ್ಥಗಳು । ಸತಿಯರೆಲ್ಲ ಭೂಮವ ತಂದು ಬಡಿಸಿದರಾಗ ॥ ೪ ॥ ವರದವೆಂಕಟನಾದಾ ಧೊರೆ ವ್ಯಾಸವಿಠಲನೇ । ಪರಮಭಕುತಿ ಸುಜ್ಞಾನವನು ಪಾಲಿಸೋ ದೇವಾ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೯೬. ರಾಗ ಭೈರವಿ, ಝಂಪೆತಾಳ.

ಇಂದಿರಾರಮಣಗೆ ಜಯಮಂಗಳಂ । ಮಂದರೋದ್ಧಾರಗೆ ಶುಭಮಂಗಳಂ ॥ ಪಲ್ಲ ॥ ಕಮಲಸಂಭವ ಜನಕನಿಗೆ ವಿಮಲಗುಣಪೂರ್ಣಗೆ ।

ಕಾಮಿತಾರ್ಥದಾತನಿಗೆ ಶುಭಮಂಗಳಂ ॥ ಕಮಲನಾಭನಿಗೆ ದಿವ್ಯ ಕಾ
ನೀಯ ಸ್ವರೂಪನಿಗೆ । ಸುಮನಸವಂದಿತಗೆ ಶುಭಮಂಗಳಂ ॥ ೧ ॥
ಕರುಣಾಪೂರ್ಣ ಶ್ರೀಹರಿಗೆ ಸರಸಿಜಾಕ್ಷ ಮುರಹರಗೆ । ಶರಧಿಶಯನ
ಶ್ರೀಕೃಷ್ಣಗೆ ಶುಭಮಂಗಳಂ ॥ ಸುರಪ ಮುಖ್ಯ ದಿವಿಜನಿಕರ ಕರುಣದಿಂ
ಸಲಹುವಗೆ । ಪರಮ ದಯಾಸಾಗರಗೆ ಶುಭಮಂಗಳಂ ॥ ೨ ॥ ವಾರಿ
ಜಾಕ್ಷನಿಗೆ ಮುದ್ದು ನಾರಿ ರುಗ್ಮಿಣೀಪತಿಗೆ । ವಾರಿಧೀಶಯನನಿಗೆ ರಘು
ವೀರಗೇ ॥ ವೀರ ಕಟ್ಟಿಮಾರುತಿಪ್ರಿಯ ರಾಮಚಂದ್ರನಿಗೆ । ವರದ ಶ್ರೀ
ನರಹರಿಗೆ ಶುಭಮಂಗಳಂ ॥ ೩ ॥ ಶ್ರೀಃ ॥

## ೧೯೭. ರಾಗ ಸುರುಟಿ, ಮಟ್ಟಿತಾಳ.

ಮಂಗಳ ಶ್ರೀಮುಖ್ಯಪ್ರಾಣಗೆ ಜಯ । ಮಂಗಳ ವೇಣುಪುರಾಧೀಶಗೆ ॥
॥ ಪಲ್ಲ ॥ ವಾರಿಧಿ ಲಂಘಿಸಿದಾತಗೆ ಮಂಗಳ । ನೀರಜಾಕ್ಷಿಯ ಭಕ್ತಗೆ
ಮಂಗಳ ॥ ಘೋರ ದಶಾಸ್ಯನ ಪುರವನು ದಹಿಸಿದ । ಶ್ರೀರಾಮದೂತಗೆ
ಜಯಮಂಗಳ ॥ ೧ ॥ ದುರುಳ ದುಶ್ಶಾಸನನ್ವೈರಿಗೆ ಮಂಗಳ । ವರ
ಭೀಮಸೇನಗೆ ಜಯಮಂಗಳ ॥ ಪರಮದಯಾನಿಧೇ ಸುರಮುನಿವಂದಿತ।
ಶಿರಿಕೃಷ್ಣಪ್ರಿಯಗೆ ಜಯಮಂಗಳ ॥ ೨ ॥ ಗುರು ವೇದವ್ಯಾಸರ ಶಿಷ್ಯಗೆ
ಮಂಗಳ । ವರಸುಖತೀರ್ಥಗೆ ಶುಭಮಂಗಳ ॥ ಹರುಷದಿ ಶ್ರೀವೇಣು
ಪುರದೊಳು ನೆಲಸಿದ । ಶಿರಿ ಕಟ್ಟಿರಾಯಗೆ ಜಯಮಂಗಳ ॥ ೩ ॥ ಶ್ರೀಃ ॥

## ೧೯೮. ರಾಗ ವಸಂತ, ಝಂಪೆತಾಳ.

ಮಂಗಳಂ ಜಯ ಮಂಗಳಂ ॥ ಪಲ್ಲ ॥ ಮಂಗಳಂ ವಾರಿಧಿಯ ಲಂಘಿ
ಸಿದಾತನಿಗೆ । ಮಂಗಳಂ ಸಿರಿಹರಿ ಚರಣಭೃಂಗನಿಗೆ ॥ ಮಂಗಳಂ
ಮಾಯಿಗಳ ಕಂಗೆಡಿಸಿದಾತಗೆ । ಮಂಗಳಂ ಗುರುಮಧ್ವಮುನಿರಾ
ಯಗೆ ॥ ಅನುಪಲ್ಲ ॥ ಹಾರುವಗೆ ಮರನಾ ಮೇಲೇರುವಗೆ ಮುದ್ರಿಕೆಯ ।
ತೋರುವಗೆ ವನಕಿತ್ತು ತೂರುವನಿಗೆ ॥ ಹೀರುವಗೆ ಅಕ್ಷಣ ಸುಚೀರುವಗೆ
ಆರ್ಭಟಿಸಿ । ಸಾರುವಗೆ ರಾವಣನ ವಿಸಾರುವವಗೆ ॥ ೧ ॥ ಭೀಮನಿಗೆ

ರಿಪುಕುಲ ವಿರಾಮನಿಗೆ ಸುಜನಾಬ್ಧಿ । ಸೋಮನಿಗೆ ಭಕ್ತಜನ ಪ್ರೇಮನಿಗೆ ॥ ಕಾಮನಯ್ಯನ ಚರಣ ತಾಮರಸವನ್ನು ಸು । ಪ್ರೇಮದಿಂ ಸವಿವ ನಿಸ್ಸೀಮನಿಗೆ ॥ ೨ ॥ ಯತಿಯಾಗಿ ಬಂದವಗೆ ಕ್ಷಿತಿಯೊಳಗೆ ನಿಂದವಗೆ । ಪತಿತರನು ಪದದ ಸುಮತಿವಂತಗೆ ॥ ರತಿಪತಿಪಿತ ನಮ್ಮ ಮೋಹನ್ನವಿಠಲನ । ಸತತ ಸೇವಿಸುವ ಅಪ್ರತಿಮಹಿಮಗೆ ॥ ೩ ॥ ಶ್ರೀಃ ॥

## ೧೯೯. ರಾಗ ಚಕ್ರವಾಕ, ಝಂಪೆತಾಳ.

ಮಂಗಳಂ ಮಂಗಳಂ ಮಹಾನುಭಾವ ಮಂಗಳಂ ಮಂಗಳಂ ॥ ಪಲ್ಲ ॥ ತುಂಗವಿಹಂಗ ತುರಂಗಗಮನ ಸಾ । ರಂಗವರದ ಭವಭಂಗ ಶುಭಾಂಗ ॥ ಗಂಗಾಜನಕ ತಿರುವೆಂಗಳಪ್ಪನೆ ವರ । ಸಂಗೀತಪ್ರಿಯ ಲೋಲ ಿಂ. ಶುಭಾಂಗ ॥ ೧ ॥ ಮಾರಜನಕ ವರಶೂರ ಸುರರ ರೂಪ । ವೀರವಿಕ್ರಮ ಲೋಕೋದ್ಧಾರ ॥ ಮಾರ ಸುನವನೀತಚೋರ ಮಾಡಿದ ಕು । ಮಾರ ಬಾ ಲೋಕೋದಾರ ಧೀರಗಂಭೀರ ॥ ೨ ॥ ಪೂತಗಮನ ಜಾಮಾತ ನೀರಜೋದ್ಭವ । ತಾತ ಮಾಧವ ಜಗನ್ನಾಥ ॥ ಚಾತುರ್ಯ ಮಾಯ ವಿಭೂತೇಶವಂದ್ಯ ಸು । ಪ್ರೀತ ವಾತಜೀವರಾತ ಪ್ರಖ್ಯಾತ ॥ ೩ ॥ ಶಿಷ್ಟ ಜನ ಪರಿಪಾಲ ದುಷ್ಟದನುಜಕಾಲ । ಸೃಷ್ಟಿಸ್ಥಿತಿಲಯ ಮೂಲೋತ್ಕೃಷ್ಟ ॥ ಅಷ್ಟೆ ಲಕ್ಷ್ಮಿಗೆ ಮುದ್ದುಕೊಟ್ಟ ಪಟ್ಟದರಸೆ ಜಗ । ಜಟ್ಟಿ ಪ್ರಸನ್ನವೆಂಕಟವಿಟ್ಠಲಾಭೀಷ್ಟ ॥ ೪ ॥ ಶ್ರೀಃ ॥

## ೨೦೦. ಆರತಿಹಾಡು.

ಮಂಗಳಂ ಜಯ ಮಂಗಳಂ । ಲಕ್ಷ್ಮೀವಲ್ಲಭ ಜಯ । ಪಕ್ಷಿವಾಹನ ಜಯ । ಮೋಕ್ಷದಾಯಕನೆ ಜಯ ಜಯ ॥ ಮೋಕ್ಷದಾಯಕನೆ ಮಧುಸೂದನ ಪ । ದ್ರಾಕ್ಷಾಗಾರಾತಿಯ ಬೆಳಗಿರೇ ॥ ಪಲ್ಲ ॥ ಜಲದೊಳು ಸಂಚರಿಸಿ ಬಳುಗಿರಿಯ ಧರಿಸಿದ । ಇಳೆಯ ದಾಡೆಯಿಂದ ನೆಗಹಿದಾ ॥ ಇಳೆಯ ದಾಡೆಯಿಂದ ನೆಗಹಿದಾ ನರಹರಿ । ಚೆಲುವಗಾರಾತಿಯ ಬೆಳಗಿರೆ ...ಭಾನೆ ॥ ೧ ॥ ಚಿ... ...ಹ್ಮಣನಾಗಿ ಬಲಿಯ ದಾನವ ಬೇಡಿ ।

ಆಕ್ರಮಿಸಿದನೆ ತ್ರಿಲೋಕ ॥ ಆಕ್ರಮಿಸಿದನೆ ತ್ರಿಲೋಕನಾಳ್ದ ಶ್ರೀರಾಮ । ಶ್ರೀಕೃಷ್ಣಗಾರತಿಯ ಬೆಳಗಿರೇ ॥ ೨ ॥ ನಗ್ನನಾಗಿ ವ್ರತವಾ ವಿಷ್ಣುವ ಚರಿಸಿದ । ಅಜ್ಞಾನಿ ಕಲಿಯ ಸದದ ॥ ಅಜ್ಞಾನಿ ಕಲಿಯ ಸದದ ಮೋಹನ್ನ ವಿಟ್ಠಲನ । ವರ್ಜ್ಞಗಾಂರಾತಿಯ ಬೆಳಗಿರೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

**॥ ಶ್ರೀಭೈಷ್ಮೀಸತ್ಯಾಸಮೇತ ಶ್ರೀಗೋಪಾಲಕೃಷ್ಣಾಯ ನಮಃ ॥**

ಹನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ ಮಧ್ವಪತಿಃ

ಶ್ರೀಗೋಪಾಲಕೃಷ್ಣಃ ಪ್ರೀಯತಾಂ ॥

ದಾಸರಪದಸಂಗ್ರಹದ ೨ನೇ ಭಾಗವು

**ಸಂಪೂರ್ಣವು.**

॥ ಶ್ರೀಕೃಷ್ಣಾರ್ಪಣಮಸ್ತು ॥

ಈ ಪುಸ್ತಕವು ಪಾವಂಜೆ ಗುರುರಾವ್, ಇವರ ಉಡುಪಿ ಶ್ರೀಕೃಷ್ಣ ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟು, ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು. ಶಾ. ಶಕ ೧೮೫೦. 1927.

ಆಕ್ರಮಿಸಿದನೆ ತ್ರಿಲೋಕ ॥ ಆಕ್ರಮಿಸಿದನೆ ತ್ರಿಲೋಕನಾಳ್ದ ಶ್ರೀರಾಮ । ಶ್ರೀಕೃಷ್ಣಗಾರತಿಯ ಬೆಳಗಿರೇ ॥ ೨ ॥ ನಗ್ನನಾಗಿ ವ್ರತವಾ ವಿಘ್ನವ ಚರಿಸಿದ । ಅಜ್ಞಾನಿ ಕಲಿಯ ಸದದ ॥ ಅಜ್ಞಾನಿ ಕಲಿಯ ಸದದ ಮೋಹನ್ನ ವಿಟ್ಠಲ ಸ । ರ್ವಜ್ಞಗಾರಾತಿಯ ಬೆಳಗಿರೆ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

॥ ಶ್ರೀಭೈಷ್ಮೀಸತ್ಯಾಸಮೇತ ಶ್ರೀಗೋಪಾಲಕೃಷ್ಣಾಯ ನಮಃ ॥

ಹನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ ಮಧ್ವಪತಿಃ

ಶ್ರೀಗೋಪಾಲಕೃಷ್ಣಃ ಪ್ರೀಯತಾಂ ॥

ದಾಸರಪದಸಂಗ್ರಹದ ೨ನೇ ಭಾಗವು

ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥

ಈ ಪುಸ್ತಕವು ಪಾವಂಜೆ ಗುರುರಾವ್, ಇವರ ಉಡುಪಿ ಶ್ರೀಕೃಷ್ಣ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟು, ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು. ಶಾ. ಶಕ ೧೮೫೦. 1927.